ಪ್ರಥಮ ಮುದ್ರಣ ೧೯೫೫

ಸಂಪಾದಕರು ಮತ್ತು ಪ್ರಕಾಶಕರು

ತ. ಸು. ಶಾಮರಾಯ





ಬೆಲೆ : ಸಾದಾಪ್ರತಿ ೧—೮—೦

ಕ್ಯಾಲಿಕೋಪ್ರತಿ ೨—೮—೦

Composed by
C. Nataraj, B.Sc.,
M. S. K. Murthy, B.Sc.,
Thandavamurthy Prakashanalaya
512, K. T. Street, Mandy Mohalla,
Mysore.

Printed by
D. Rajarathnam
Sri Panchacharya Electric Press,
Mysore

# ಅರಿಕೆ

ನಮ್ಮ ಸಾಹಿತ್ಯ ಸರ್ವತೋಮುಖವಾಗಿ ಬೆಳೆಯುತ್ತಿರುವ ಈ ಕಾಲದಲ್ಲಿ ಅದರಲ್ಲಿ ಅತ್ಯುತ್ತಮವಾದುವನ್ನು ಆಯ್ದುಕೊಡುವ ಕಾರ್ಯ ಅಗತ್ಯವಾಗುತ್ತದೆ. ಈ ಕಾರಣದಿಂದಲೇ ನಾವು ಮಹಾಕವಿ ನಾರಣಪ್ಪನ ಭಾರತವನ್ನು ಸಂಗ್ರಹಿಸುವ ಕಾರ್ಯವನ್ನು ಕೈಕೊಂಡು, ಈ ವರೆಗೆ ನಾಲ್ಕು ಪರ್ವಗಳ ಸಂಗ್ರಹಗಳನ್ನು ಪ್ರಕಟಿಸಿದ್ದೇವೆ. "ಅರಣ್ಯಪರ್ವ" ಐದನೆಯ ಸಂಗ್ರಹ, ಮೂಲದ ಕಥಾಸರಣಿ ಕೆಡದಂತೆ, ಪಾತ್ರನಿರೂಪಣಕ್ಕೆ ಭಂಗಬಾರದಂತೆ, ಆವಶ್ಯವಾದ ವರ್ಣನೆಯು ಮತ್ತು ವಿವರಣೆಯು ಸಾರ ಬಿಟ್ಟುಹೋಗದಂತೆ, ಎಲ್ಲಕ್ಕೂ ಮಿಗಿಲಾಗಿ ಕವಿಯ ವ್ಯಕ್ತಿತ್ವ ಮತ್ತು ವಿಶೇಷ ಪ್ರತಿಭೆಗೆ ಲೋಪ ಬರದಂತೆ ಈ ಸಂಗ್ರಹ ಕಾರ್ಯವನ್ನು ಮಾಡಬೇಕೆಂಬುದು ನಮ್ಮ ಗುರಿ. ಇತರ ಪರ್ವಗಳ ಸಂಗ್ರಹದಂತೆ "ಅರಣ್ಯಪರ್ವ ಸಂಗ್ರಹ"ದಲ್ಲಿಯೂ ಈ ಗುರಿಯನ್ನು ಸಾಧಿಸಿರುವೆವೆಂದು ನಮ್ಮ ಭರವಸೆ.

ಕುಮಾರವ್ಯಾಸನನ್ನು ಜನಸಾಮಾನ್ಯರಿಗೆ ಪರಿಚಯ ಮಾಡಿಕೊಡಲು ಸಿದ್ಧಪಡಿಸಿರುವ ಈ ಸಂಗ್ರಹದಲ್ಲಿ ಪಾಠಾಂತರಗಳನ್ನು ಗುರುತುಮಾಡುವ ತಂಟೆಗೆ ನಾವು ಹೋಗಿಲ್ಲ. ಆದರೂ ಈ ಗ್ರಂಥವನ್ನು ಸಿದ್ಧಪಡಿಸುವುದರಲ್ಲಿ ಮೈಸೂರು ಪ್ರಾಚ್ಯ ಸಂಶೋಧನಾಲಯದವರಿಂದ ಮುದ್ರಿತವಾದ ಪ್ರತಿಯನ್ನೂ, ೧೯೩೮ ರಲ್ಲಿ ಮುದ್ರಿತವಾದ ಪೇಟೆಯ ಪ್ರತಿಯನ್ನೂ ದಿವಂಗತ ವೆಂಕಣ್ಣಯ್ಯನವರು ಪ್ರತಿಮಾಡಿಸಿ ಇಟ್ಟಿರುವ ಪ್ರಾಚ್ಯ ಸಂಶೋಧನಾಲಯದವರ 'ಕ' ಪ್ರತಿಯನ್ನೂ ಮೂರು ಓಲೆಯ ಪ್ರತಿಗಳನ್ನೂ ಬಳಸಿಕೊಂಡಿದ್ದೇವೆ. ಈ ಪ್ರತಿಗಳನ್ನು ಬಳಸಿಕೊಂಡು ಸಂಗ್ರಹವನ್ನು ಸಂಪಾದನೆ ಮಾಡುವ ಕಾರ್ಯದಲ್ಲಿ ತನಗೆ ನೆರವಾದ ನನ್ನ ವಿದ್ಯಾರ್ಥಿ ಮಿತ್ರ ಶ್ರೀ ಡಿ. ಟಿ. ರಂಗಪ್ಪ, ಎಂ. ಎ. ಅವರನ್ನು ನಾನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಈ ಸಂಗ್ರಹವನ್ನು ಅಂದವಾಗಿಯೂ ಶೀಘ್ರವಾಗಿಯೂ ಮುದ್ರಿಸಿ ಕೊಟ್ಟ ತಾಂಡವಮೂರ್ತಿ ಅಚ್ಚುಕೂಟದವರನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

**ತ. ಸು. ಶಾಮರಾಯ**

**ಸಂಪಾದಕ**

# ವಿಷಯಾನುಕ್ರಮಣಿಕೆ





# ಪೀಠಿಕೆ

## ೧. ಕವಿ ಚರಿತ್ರೆ

ಮಹಾಕವಿ ನಾರಣಪ್ಪನ ಕಾಲ, ಮತಗಳ ವಿಚಾರದಲ್ಲಿ ಭಿನ್ನಾಭಿಪ್ರಾಯವಿದ್ದು, ವಿಪುಲವಾದ ಚರ್ಚೆ ನಡೆದಿದೆ. ಇಲ್ಲಿ ಆ ಚರ್ಚೆಯ ಗೋಜಿಗೆ ಹೋಗದೆ, ಬಹುಜನಸಮ್ಮತವಾದ ಒಂದು ನಿರ್ಧಾರಕ್ಕೆ ನಾವೂ ಶರಣು ಹೋಗುತ್ತೇವೆ.

ನಾರಣಪ್ಪನ ಕಾಲ ಕ್ರಿ. ಶ. ೧೫ನೆಯ ಶತಮಾನದ ಪೂರ್ವಾರ್ಧವೆಂದು ಶ್ರೀಮಾನ್ ಮಂಜೇಶ್ವರ ಗೋವಿಂದ ಪೈ ಅವರು ನಿರ್ಧರಿಸಿದ್ದಾರೆ,* ಅವರು ಕೊಡುವ ಕಾರಣಗಳು ಸ್ಥೂಲವಾಗಿ ಇಷ್ಟು—

೧. ಗದುಗಿನ ವೀರನಾರಾಯಣಸ್ವಾಮಿ ದೇವಸ್ಥಾನದಲ್ಲಿರುವ ಕ್ರಿ. ಶ. ೧೫೩೯ರ ಶಾಸನ ಒಂದರಲ್ಲಿ 'ಕುಮಾರವ್ಯಾಸ' ಎಂಬ ಹೆಸರನ್ನು ಸ್ಪಷ್ಟವಾಗಿ ತಿಳಿಸಿರುವುದರಿಂದಲೂ, ಕುಮಾರವ್ಯಾಸನು ರಚಿಸದೆ ಬಿಟ್ಟ ಇತರ ಪರ್ವಗಳನ್ನು ಕೃಷ್ಣರಾಯ (ಕ್ರಿ.ಶ. ೧೫೦೯–೧೫೩೯)ನ ಅಪ್ಪಣೆಯ ಮೇರೆಗೆ ತಾನು ರಚಿಸಿದೆನೆಂದು ತಿಮ್ಮಣ್ಣ ಕವಿ ತನ್ನ ಶಾಂತಿಪರ್ವದಲ್ಲಿ ಹೇಳಿಕೊಂಡಿರುವುದರಿಂದಲೂ ನಾರಣಪ್ಪನು ಕ್ರಿ. ಶ. ೧೫೦೦ ಕ್ಕೂ ಹಿಂದಿನವನೆಂದು ಸ್ಪಷ್ಟವಾಗಿದೆ.

೨. ನಾರಣಪ್ಪ ತನ್ನ ಕಾವ್ಯದಲ್ಲಿ, ದ್ರೌಪದೀ ಸ್ವಯಂವರಕ್ಕೆ 'ಮಹೇಶ್ವರ ಜೈನ ಭೈರವ ಬುದ್ಧ ಲಿಂಗಿಗಳು' ಬಂದಿದ್ದರೆಂದು ಹೇಳಿದ್ದಾನೆ. 'ಲಿಂಗಿ' ಎಂದು ವ್ಯವಹರಿಸಿರುವುದು ಬಸವೇಶ್ವರನ ಸಂಪ್ರದಾಯದ ಲಿಂಗಮತರಾದ ವೀರಶೈವರನ್ನೇ. ಅಲ್ಲದೆ ತನ್ನ ಕಾವ್ಯದಲ್ಲಿ ಅಲ್ಲಲ್ಲಿ ಬಲ್ಲಾಳದಸ್ತಿ, ಬಲ್ಲಾಳನಾಥ ಎಂಬ ಮಾತುಗಳನ್ನು ಕವಿ ಬಳಸಿದ್ದಾನೆ. ಇದು ಹೊಯ್ಸಳರ ವೀರಬಲ್ಲಾಳನನ್ನು ಸೂಚಿಸುತ್ತದೆ. ಈ ಕಾರಣಗಳಿಂದ ಕವಿ ಕ್ರಿ. ಶ. ೧೨೦೦ ರಿಂದ ಈಚೆಯವನಾಗಿರಬೇಕು.

---

*ಕುಮಾರವ್ಯಾಸ ಪ್ರಶಸ್ತಿ, ಕಾಲವಿಚಾರ.

೩. ನಾರಣಪ್ಪ ಕ್ರಿ. ಶ. ೧೨೦೦ ರಿಂದ ೧೫೦೦ ರ ಮಧ್ಯದಲ್ಲಿ ಯಾವಾಗ ಇದ್ದನೆಂಬುದನ್ನು ನಿರ್ಧರಿಸಲು, ಆತನ ಕಾವ್ಯದ ಅಂತರಿಕ ಪ್ರಮಾಣಗಳನ್ನು ಪರಿಶೀಲಿಸಬೇಕು.

(ಅ) ಭಾರತದಲ್ಲಿ ಮರಾಠೀ ಭಾಷೆಯ ಅನೇಕ ಮಾತುಗಳು ಬಳಕೆಯಾಗಿವೆ. ಅಲ್ಲದೆ ಈಗ ಪ್ರಥಮೈಕ ವಚನದಲ್ಲಿ ಅಕಾರಾಂತವಾಗಿರತಕ್ಕ ನಾಮವಾಚಕಗಳು ಉಕಾರಾಂತವಾಗಿ ಪ್ರಯೋಗವಾಗಿರುವ ಅಚ್ಚ ಮರಾಠೀ ವಿಭಕ್ತಿರೂಪಗಳನ್ನೊಳಗೊಂಡ ಒಂದು ಇಡೀ ಷಟ್ಪದಿಯೇ ಭೀಷ್ಮಪರ್ವದ ನಾಲ್ಕನೆಯ ಸಂಧಿ ೭೦ನೆಯ ಪದ್ಯದಲ್ಲಿ ಕಂಡುಬರುತ್ತವೆ* ಈ ಬಗೆಯಾದ ರೂಪ ಕ್ರಿ. ಶ. ೧೨೯೦ ರಲ್ಲಿ ರಚಿತವಾದ 'ಜ್ಞಾನೇಶ್ವರಿ' ಎಂಬ ಮರಾಠೀ ಗ್ರಂಥದಲ್ಲಿಯೂ ಕಂಡುಬರುತ್ತದೆ. ಮುಂದೆ ಕೆಲವು ವರ್ಷಗಳಲ್ಲಿಯೇ ಈ ಉಕಾರಾಂತ ಪ್ರಯೋಗ ಲುಪ್ತವಾಗಿಹೋಗಿದೆ. ಆದ್ದರಿಂದ ನಾರಣಪ್ಪ ೧೨೯೦ ರ ಸುಮಾರಿನಲ್ಲಿ ಇದ್ದಿರಬೇಕು.

(ಆ) ಕುಮಾರವ್ಯಾಸ ಭಾರತದಲ್ಲಿ ತುರುಕರು, ಸಾಹಣಸಮುದ್ರ, ಹಸಣ, ತೆಂಕಣಚೇದಿ, ಸಮುದ್ರಹೋಸಲ—ಇತ್ಯಾದಿ ರಾಜ್ಯಗಳ ರಾಜರು ವ್ಯವಹೃತರಾಗಿದ್ದಾರೆ. ಈ ಮಾತುಗಳು ಸಂಸ್ಕೃತಭಾರತದಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಸಾಹಣರೆಂದಿರುವವರು ದೇವಗಿರಿಯ ಯಾದವವಂಶದ ಅರಸರಾದ ಸೇಉಣರೇ ಎಂದು ತೋರುತ್ತದೆ. ಈ ವಂಶ ನಾಶವಾದದ್ದು ಕ್ರಿ. ಶ. ೧೩೧೮ ರಲ್ಲಿ. ಸಮುದ್ರಹೋಸಲ ಎಂದು ಕರೆದಿರುವುದು ದ್ವಾರಸಮುದ್ರದ ಹೊಯ್ಸಳರನ್ನು; ದ್ವಾರಸಮುದ್ರ ಕ್ರಿ.ಶ. ೧೩೧೦ರಲ್ಲಿ ತುರುಕರ ಕೊಳ್ಳೆಗೆ ಈಡಾಯಿತು; ಕ್ರಿ. ಶ. ೧೩೨೭ರಲ್ಲಿ ಸಂಪೂರ್ಣವಾಗಿ ನಾಶವಾಯಿತು. ನಾರಣಪ್ಪ ಈ ಅರಸುಗಳನ್ನು ಕಂಡೋ ಕೇಳಿಯೋ ಇರಬೇಕು. ಆದ್ದರಿಂದ ಕವಿ ಆ ಕಾಲದ ಹಿಂಚು ಮುಂಚಿನವನಾಗಿರಬೇಕು.

(ಇ) ತುರುಷ್ಕ ಅಥವಾ ತುರುಕ ದೊರೆಯನ್ನು ಧರ್ಮರಾಜನ ಪಟ್ಟಾಭಿಷೇಕಕ್ಕೆ ಕರಸಿ ಕವಿ ತನ್ನ ಕಾವ್ಯದಲ್ಲಿ ಮನ್ನಣೆ ತೋರಿಸುವುದರಿಂದಲೂ ಎಲ್ಲಿಯೂ ಅವರ ಹಾವಳಿಯನ್ನು ವ್ಯಂಗ್ಯವಾಗಿ ಕೂಡ ಸೂಚಿ

---

*ಈ ಪದ್ಯ ನಮ್ಮಲ್ಲಿರುವ ಕೈಬರಹದ ಪ್ರತಿಗಳಲ್ಲಿ ಕಂಡುಬರುವುದಿಲ್ಲ.

ಸಿಲ್ಲವಾದುದರಿಂದಲೂ ಈತನು ತುರುಕರ ಹಾವಳಿ ಕರ್ನಾಟಕಕ್ಕೆ ಸೋಕುವ ಮುನ್ನವೇ ಇದ್ದವನಾಗಿರಬೇಕು.

(ಈ) ಕ್ರಿ.ಶ. ೧೨೨೩ರಲ್ಲಿ ಗದುಗು ಪ್ರಾಂತವು ಹೊಯ್ಸಳರ ಕೈತಪ್ಪಿ ಸೇಉಣರ ವಶವಾಯಿತು. ಕವಿಯು ತನ್ನ ಕಾವ್ಯದಲ್ಲಿ ವಿಪುಲವಾಗಿ ಮರಾಠೀ ಪದಗಳನ್ನು ಬಳಸಿರುವುದರಿಂದ, ಆತನು ೧೨೨೩ಕ್ಕೆ ಈಚೆಯಲ್ಲೇ ಕಾವ್ಯವನ್ನು ಬರೆದಿರಬೇಕು. ಆದರೆ ತಾನು ಸೇಉಣರ ರಾಜ್ಯದಲ್ಲಿದ್ದರೂ ತನ್ನ ಕಾವ್ಯದಲ್ಲಿ ಹೊಯ್ಸಳರಿಗೆ ಗೌರವ ತೋರಿಸುವುದರಿಂದ ಆತನ ನಾಡು ಹೊಯ್ಸಳರ ಕೈತಪ್ಪಿ ಇನ್ನೂ ಬಹಳ ಕಾಲವಾಗಿದ್ದಿರಲಾರದು; ಹೆಚ್ಚೆಂದರೆ ೧೦-೧೨ ವರ್ಷಗಳಾಗಿರಬಹುದು.

ಆದ್ದರಿಂದ ನಾರಣಪ್ಪ ಕ್ರಿ. ಶ. ೧೨೩೦-೩೫ ರೊಳಗೆ ಇದ್ದಿರಬೇಕು.

ಮಹಾಕವಿಯೊಬ್ಬನು ತಮ್ಮವನೆಂದು ಹೇಳಿಕೊಳ್ಳುವುದು ಹೆಮ್ಮೆಯೇ ಸರಿ. ನಾರಣಪ್ಪ ವೀರಶೈವನೆಂದು, ಬ್ರಾಹ್ಮಣನೆಂದು—ಬ್ರಾಹ್ಮಣರಲ್ಲಿ ಸ್ಮಾರ್ತನೆಂದು, ವೈಷ್ಣವನೆಂದು, ಭಾಗವತ ಪಂಥದವನೆಂದು—ವಾದವಾಡುವುದುಂಟು. ಇದ್ದುದನ್ನು ಇದ್ದಂತೆ ಕಂಡುಹಿಡಿಯಲು ಹೋಗಬೇಕೆಂಬ ದೃಷ್ಟಿ ಸಾಧುವಾದುದಾದರೂ ಅಂಧಶ್ರದ್ಧೆಯಿಂದ ಹುರಿಗೊಂಡು, ಕದನಕ್ಕೆ ಇಳಿಯುವುದು ಅಷ್ಟು ಉಚಿತವಾದುದಲ್ಲ. ನಾರಣಪ್ಪನಂತಹ ಮಹಾಕವಿ ನಮ್ಮ ನಾಡಿನವನೆಂಬ ದೊಡ್ಡತನವೇ ನಮಗೆ ಸಾಲದೆ? ಎಲ್ಲೆಡೆಯಿಂದಲೂ ಆಹಾರವನ್ನು ಹೀರಿ ಗಗನಚುಂಬಿತವಾಗಿ ನಿಂತಿರುವ ಭವ್ಯವೃಕ್ಷದಂತೆ, ಕವಿ ಎಲ್ಲ ಮತಗಳ, ಎಲ್ಲ ಧರ್ಮಗಳ ಸಾರವನ್ನು ಹೀರಿ, ತನ್ನ ಸಾರಸ್ವತ ಸಂಪತ್ತಿನಿಂದ ತೊಗಿ ಬೆಳಗುವನು. ಕುಮಾರವ್ಯಾಸನ ಕಾವ್ಯದಲ್ಲಿ ಸರ್ವಧರ್ಮಗಳು ಸಮನ್ವಯಗೊಂಡಿವೆ. ವಿಷ್ಣುವನ್ನು ಅನನ್ಯ ಭಕ್ತಿಯಿಂದ ಸ್ತುತಿಸುತ್ತಾನೆ; ಹಾಗೆಯೇ ಶಿವನನ್ನು ಸ್ತುತಿಸುತ್ತಾನೆ. ಅವನ ಕಾವ್ಯದಲ್ಲಿ ಭಕ್ತಿಮಾರ್ಗವಿದೆ, ಕರ್ಮಮಾರ್ಗವಿದೆ, ಜ್ಞಾನಮಾರ್ಗವಿದೆ; ದ್ವೈತವಿದೆ, ಅದ್ವೈತವಿದೆ, ವಿಶಿಷ್ಟಾದ್ವೈತವಿದೆ. ಆದ್ದರಿಂದ ಆತನನ್ನು ನಮ್ಮ ಮಟ್ಟಕ್ಕೆ ಎಳೆದು, ಜಾತಿಮತಗಳ ಸಂಕೋಲೆಯಲ್ಲಿ ಬಿಗಿದು, ಇದಮಿತ್ಥಂ ಎಂದು ಊಹೆಯಿಂದ ಹೇಳುವುದು ಸಾಹಸದ ಕೆಲಸ. ಹೇಸರೇನೊ ಆತನು ಬ್ರಾಹ್ಮಣನೆಂದು ಹೇಳಲು ಸಾಧಕವಾಗಿದೆ. ಸಕಲ ಶಾಸ್ತ್ರಾಗಮಪುರಾಣಾ

ದಿಗಳನ್ನು ಕರತಲಾಮಲಕವಾಗಿ ಮಾಡಿಕೊಂಡಿದ್ದ ಬಹುದೊಡ್ಡ ವ್ಯಕ್ತಿ, ಆತ.

ಕವಿಯು ಹುಟ್ಟಿದೂರು ಕೋಳಿವಾಡವೆಂಬ ಒಂದು ಚಿಕ್ಕ ಗ್ರಾಮ. ಈ ಊರು ಆತನ ವಂಶದವರಿಗೆ ಉಂಬಳಿಯಾಗಿ ಬಂದಿತ್ತೆಂದು ಹೇಳು ತ್ತಾರೆ. ಆತನು ಗದುಗಿನ ವೀರನಾರಾಯಣಸ್ವಾಮಿಯ ಅಂಕಿತದಲ್ಲಿ ತನ್ನ ಗ್ರಂಥವಾದ ಕನ್ನಡ ಭಾರತವನ್ನು ಬರೆದಿದ್ದಾನೆ. ಸಂಸ್ಕೃತ ಭಾರತದ ಮೊದಲ ಹತ್ತು ಪರ್ವಗಳ ಕಥೆಯನ್ನು ಮಾತ್ರ ಈತ ಕನ್ನಡಿಸಿದ್ದಾನೆ. ಅಷ್ಟಿಗೇ ಕಾವ್ಯ ಎಂಟು ಸಹಸ್ರ ಪದ್ಯಗಳಿಗಿಂತಲೂ ಹೆಚ್ಚಾಗಿ ಬೆಳೆದು ಹೋಗಿದೆ. ನಾರಣಪ್ಪ ಭಾರತವನ್ನು ಮಾತ್ರವಲ್ಲದೆ ಐರಾವತವೆಂಬ ಮತ್ತೊಂದು ಕಾವ್ಯವನ್ನೂ ಬರೆದಿರುವನೆಂದು ಕವಿಚರಿತೆಕಾರರಾದ ದಿವಂ ಗತ ಆರ್. ನರಸಿಂಹಾಚಾರ್ಯರು ತಿಳಿಸುತ್ತಾರೆ.

ಮಹಾಕವಿ ನಾರಣಪ್ಪನನ್ನು ಆತನ ತರುವಾಯ ಬಂದ ಅನೇಕ ಕವಿಗಳು ಬಾಯಿತುಂಬ ಹೊಗಳಿದ್ದಾರೆ. ನಮ್ಮ ನಾಡಿನ ಅತ್ಯಂತ ಜನ ಪ್ರಿಯವಾದ ಕಾವ್ಯಗಳಲ್ಲಿ ಭಾರತವೂ ಒಂದು.

## ೨. ಕಾವ್ಯದ ಮೂಲ, ಅದರ ಹಿರಿಮೆ

ನಾರಣಪ್ಪನ ಕನ್ನಡ ಮಹಾಭಾರತಕ್ಕೆ ಮೂಲ ಸಂಸ್ಕೃತದ ಮಹಾಭಾರತ. ಇದರ ಕರ್ತೃ ವ್ಯಾಸಮಹರ್ಷಿಯೆಂದು ಪ್ರತೀತಿ. ಈತನ ಮತ್ತು ಈತನ ಕಾವ್ಯದ ಹಿರಿಮೆಯನ್ನು ಕವಿಯೊಬ್ಬನು 'ಜಗತ್ತಿನಲ್ಲಿ ಇರುವುದೆಲ್ಲವೂ ಭಾರತದಲ್ಲಿವೆ; ಭಾರತದಲ್ಲಿ ಇಲ್ಲದುದು ಜಗತ್ತಿನಲ್ಲಿ ಇಲ್ಲ.' ಎಂದು ಹೇಳಿದ್ದಾನೆ. ಇದು ಪರಮಪೂಜ್ಯವಾದ ಧರ್ಮಗ್ರಂಥವೆಂದು ಪರಿ ಗಣಿತವಾಗಿದೆ. ಧರ್ಮವಿಷಯಕವಾದ ಅನೇಕ ಕ್ಲಿಷ್ಟಸಮಸ್ಯೆಗಳಿಗೆ ಇಲ್ಲಿ ಸದುತ್ತರ ದೊರೆಯುತ್ತದೆ. ಆದ್ದರಿಂದ, ಧರ್ಮಕ್ಕೆ ದೊಡ್ಡ ಆಧಾರದಂತಿ ರುವ ಈ ಗ್ರಂಥವನ್ನು ಜನತೆ ಪಂಚಮವೇದವೆಂದು ಕರೆದು ಗೌರವಿಸಿದೆ. ಕಾವ್ಯದ ಮಧ್ಯದಲ್ಲಿ ಜನಮೇಜಯನಿಗೊ ಧೃತರಾಷ್ಟ್ರನಿಗೊ, ಋಷಿ ಗಳಿಗೊ ಧರ್ಮವಿಷಯಕವಾದ ಸಂದೇಹ ಹುಟ್ಟಿದ ಕಡೆ, ಅದರ ನಿವಾರಣೆ

ಗಾಗಿ ಧರ್ಮಜಿಜ್ಞಾಸೆ ನಡೆದಿದೆ. ರೌಮಹರ್ಷಣಿ, ಸನತ್ಸುಜಾತಾದಿಗಳು ತಮ್ಮ ಜ್ಞಾನವನ್ನು ಈ ಕಾವ್ಯಗಂಗೆಯಲ್ಲಿ ಸಂಗಮ ಮಾಡಿದ್ದಾರೆ; ಯಕ್ಷ ನಹುಷ ಮೊದಲಾದವರು ಧರ್ಮದ ಪ್ರೌಢಪರೀಕ್ಷೆಯನ್ನು ನಡಸಿದ್ದಾರೆ. ಕಾವ್ಯದ ನಾಡಿನಾಡಿಯಲ್ಲಿಯೂ ಧರ್ಮರಸ ಹರಿಯುತ್ತಿದೆ. ಆದರೂ ಇದು ಬರಿಯ ಧರ್ಮಗ್ರಂಥವಲ್ಲ; ಒಂದು ಇತಿಹಾಸ. ಇದು ಭರತಖಂಡದ ಒಂದು ಕಾಲದ ನಾಗರಿಕತೆ ಸಂಸ್ಕೃತಿಗಳನ್ನು ಒಳಗೊಂಡು ಸಮಗ್ರ ಜನ ಜೀವನವನ್ನು ಅದ್ಭುತರೀತಿಯಲ್ಲಿ ವಿವರಿಸುತ್ತದೆ. ಇದನ್ನು ಹೇಳುತ್ತಿರುವ ವ್ಯಾಸಮಹರ್ಷಿ ಕುರುವಂಶ ಅಳಿದು ಹೋಗುತ್ತಿದ್ದಾಗ, ಅದಕ್ಕೆ ಜೀವಕಳೆ ಕೊಟ್ಟವನು; ಒಂದು ದೃಷ್ಟಿಯಿಂದ ಮೂಲಪುರುಷನಾಗಿದ್ದುಕೊಂಡು ಆ ವಂಶದ ಮೂರು ತಲೆ ಮಾರುಗಳ ಬಾಳು ಅಳಿವುಗಳನ್ನು ಕಣ್ಣಾರ ಕಂಡ ವನು. ಉತ್ತಮ ಇತಿಹಾಸಕಾರನಂತೆ ಸತ್ಯವನ್ನು ಸದಾ ದೃಷ್ಟಿಯಲ್ಲಿಟ್ಟು ಕೊಂಡು, ಯಾವುದೊಂದು ಪಕ್ಷವನ್ನೂ ವಹಿಸದೆ ಅನುಭವೈಕವೇದ್ಯವಾದು ದನ್ನು ಕಾವ್ಯವಾಗಿ ಕಟ್ಟಿದ್ದಾನೆ; ಕೃತಕೃತ್ಯನಾಗಿದ್ದಾನೆ.

ರಾಮಾಯಣದ ಕವಿ ಆದಿಕವಿಯೆಂದು ಪ್ರಖ್ಯಾತನಾಗಿದ್ದರೂ— ಧರ್ಮ ಇತಿಹಾಸಗಳನ್ನು ಒಳಗೊಂಡ ಭಾರತ ಪುರಾಣವೆಂದು ಪರಿಗಣಿತ ವಾಗಿ, ಅದರ ಕರ್ತೃವಿಗೆ ಆದಿಕವಿಯ ಪಟ್ಟ ತಪ್ಪಿಹೋಗಿದ್ದರೂ—ನ್ಯಾಯ ವಾಗಿ ಆ ಕೀರ್ತಿ ಭಾರತಕರ್ತೃವಿಗೇ ಸಲ್ಲಬೇಕು. ಭಾರತವು ರಾಮಾಯಣ ಕ್ಕಿಂತಲೂ ಪುರಾತನವಾದುದೆಂದು ಬಹುಜನರ ಹೇಳಿಕೆ. ಅಪೌರುಷೇಯ ಗಳೆಂದು ಪ್ರಖ್ಯಾತವಾಗಿರುವ ವೇದಗಳಲ್ಲಿ ಬೇರಿಟ್ಟು, ಜನರ ಬಾಯಿಂದ ಬಾಯಿಗೆ ವೇದಗಳಂತೆ ಹರಿದು ಬರುತ್ತಾ ಹತ್ತಾರು, ನೂರಾರು ಕೊಂಬೆ ಗಳನ್ನು ಒಳಗೊಂಡು ಬೆಳೆದು ನಿಂತಿದೆ, ಈ ಕಾವ್ಯವಟವೃಕ್ಷ. ಗಾಯಕ ರಾದ ಕವಿಗಳು, ಶ್ರೋತೃಗಳ ಒಲವಿಗೆ ತಕ್ಕ ಹಾಗೆ ಇದನ್ನು ಬೆಳಸಿದರು. ಬೆಳೆದು ಬೆಳೆದು, ಇದು ಒಂದು ಲಕ್ಷ ಶ್ಲೋಕಗಳನ್ನು ಒಳಗೊಂಡ ಮಹಾ ಕಾವ್ಯವಾಯಿತು.

ಬೃಹತ್ತು ಮಹತ್ತುಗಳೆರಡರಲ್ಲಿಯೂ ಭಾರತವನ್ನು ಮೀರಿಸುವ ಕಾವ್ಯ ಇನ್ನೂ ಜಗತ್ತಿನಲ್ಲಿ ಉದಯವಾಗಿಲ್ಲ. ಈ ಕಾವ್ಯವಾರಿಧಿಯಿಂದ ದೊಡ್ಡ ಪುಟ್ಟ ನೂರಾರು ಕವಿಗಳು ತಮ್ಮ ಕಾವ್ಯಗಳಿಗೆ ವಸ್ತು ರತ್ನಗಳನ್ನು

ಆಯ್ದುಕೊಂಡಿದ್ದಾರೆ. ಎಷ್ಟು ಹೊಗೆದರೂ ಮುಗಿಯದಷ್ಟು ವಿಷಯ ಗಳನ್ನು ಒಳಗೊಂಡು ಪುಷ್ಟವಾಗಿರುವ ಮಹಾಕಾವ್ಯ ಇದು. ಹೀಗೆ ಜನಾನುರಾಗವನ್ನು ಗಳಿಸಿಕೊಂಡಿರುವುದರಲ್ಲಿ ಇದರೊಡನೆ ಸ್ಪರ್ಧಿಸಿರುವ ಕಾವ್ಯವೆಂದರೆ ರಾಮಾಯಣವೊಂದೇ. ಆದರೆ ರಾಮಾಯಣ, ಧರ್ಮಾರ್ಥೇನು ಇನ್ನೂ ಮೂರು ಕಾಲುಗಳನ್ನು ಊರಿ ನಿಂತಿದ್ದ ತ್ರೇತಾಯುಗಕ್ಕೆ ಸಂಬಂಧಿಸಿದುದು. ನಮ್ಮ ಯುಗಕ್ಕೆ ಅದು ಬಹುದೂರ. ಅದರಲ್ಲಿ ಕಂಡುಬರುವ ಆದರ್ಶ ಚಿತ್ರ 'ದೂರದ ಬೆಟ್ಟ, ಕಣ್ಣಿಗೆ ನುಣ್ಣಗೆ.' ಸುಲಭವಾಗಿ ಅನುಸರಣ ಸಾಧ್ಯವಲ್ಲ. ಆದರೆ ಭಾರತದ ವಿಚಾರ ಹಾಗಲ್ಲ. ಇಲ್ಲಿನ ಹಲವು ಪಾತ್ರಗಳು ನಮ್ಮ ಸಮೀಪ ಬಂಧುಗಳು. ಅವರ ಜೀವನ ನಮ್ಮ ಜೀವನಕ್ಕೆ ಭೂತಕನ್ನಡಿ ಹಿಡಿದಂತೆ ಇದೆ. ಅವರು ಮಾನವ ಸಹಜವಾದ ಗುಣದೋಷಗಳಿಂದ ಕೂಡಿ ಸಜೀವ ವ್ಯಕ್ತಿಗಳಾಗಿ ತೋರುತ್ತಾರೆ. ರಾಮಾಯಣದ ಪಾತ್ರಗಳಿಗಿಂತಲೂ ಭಾರತದ ಪಾತ್ರಗಳು ಹೆಚ್ಚು ಅನುಸರಣಸಾಧ್ಯವೆಂದು ತೋರುತ್ತದೆ.

ಇಂಥ ಲೋಕಪ್ರಿಯವಾದ ಈ ಕಾವ್ಯವನ್ನು ನಮ್ಮವರು ಮಾತ್ರವೇ ಅಲ್ಲದೆ ಹೊರಗಿನವರೂ ಬಾಯಿತುಂಬ ಹೊಗಳಿದ್ದಾರೆ. ಅವರಲ್ಲಿ ಅಮೇರಿಕಾ ದೇಶದ ಪ್ರೊಫೆಸರ್ ಎ. ಆರ್. ಆರೆಂಜ್ ಎಂಬ ವಿದ್ವಾಂಸರು ತಮ್ಮ ದೇಶದ ಸಾಹಿತ್ಯದ ಇಂದಿನ ಅವನತಿಯನ್ನು ನೆನೆದು, ತಮ್ಮ ಉದ್ಧಾರಕ್ಕೆ ಭರತಖಂಡವೂ ಮಹಾಭಾರತವೂ ಶರಣ್ಯವೆಂದು ಹೇಳುತ್ತಾ ಮಹಾಭಾರತಕ್ಕೆ ಅವರು ಅರ್ಪಿಸಿರುವ ಪುಷ್ಪಾಂಜಲಿ ಇದು—'ಸಾಹಿತ್ಯದ ಮೂಲಕ ಸಂಸ್ಕೃತಿಯನ್ನು ಸೃಷ್ಟಿಮಾಡುವ ಪ್ರಯತ್ನಗಳಲ್ಲಿ ಮಹಾಭಾರತವು ಮಾನವ ಇತಿಹಾಸವಲ್ಲಿಯೇ ಏಕೈಕವೂ ಅತ್ಯಂತ ಮಹತ್ವಪೂರಿತವಾದುದೂ ಆಗಿದೆ. ಅದನ್ನು ರಚಿಸಿದ ಮಹಾಪುರುಷನ ಮೇಧಾಶಕ್ತಿಯನ್ನು ಅಳೆಯುವುದು ಯಾರಿಗಾದರೂ ಸುಲಭವಲ್ಲ. ಆ ಬುದ್ಧಿಶಕ್ತಿಯನ್ನು ಅರಿತುಕೊಳ್ಳಲು ಮಾಡುವ ಪ್ರಯತ್ನವೇ ಒಂದು ಉದಾರವಾದ ವಿದ್ಯಾಭ್ಯಾಸವಾದೀತು ! ಅವರ ವಿಷಯಾನುಕ್ರಮಣಿಕೆಯ ಪರಿಚಯವೇ ಸಾಕು, ನಮ್ಮ ಪ್ರಾರ್ಥನಾದಿನದ ಯಾತ್ರೆಗಿಂತಲೂ ಹೆಚ್ಚು ಮಹತ್ವಪೂರಿತವಾದುದು. 'ಇಲಿಯಡ್,' 'ಒಡಿಸ್ಸಿ' ಗಳು ಅವರಲ್ಲಿನ ಉಪಕಥೆ

ಗಳಿಗೆ ಸಮಾನ. ಜಗತ್ಪ್ರಸಿದ್ಧವಾದ ಭಗವದ್ಗೀತೆಯು, ಅದರಲ್ಲಿ ಬಂದಿರುವ ಅನೇಕ ಯುದ್ಧಗಳಲ್ಲಿ ನಡೆಯುತ್ತಿದ್ದ ಒಂದು ಯುದ್ಧದ ಪೂರ್ವಭಾವಿಯಾಗಿ ನಡೆಸಿದ ಒಂದು ಸಂಭಾಷಣೆ ಮಾತ್ರ. ನೂರಾರು ಪಾತ್ರಗಳು; ಘಟನೆಗಳ ಮೇಲೆ ಘಟನೆಗಳು; ಅವುಗಳಲ್ಲಿ ಅನಂತಕಾಲದ ವಿಶ್ವವ್ಯಾಪ್ತಿ. ಇಷ್ಟಾದರೂ ಒಂದೆಡೆಯಲ್ಲಿಯೂ ಕಾವ್ಯದ ರಚನೆ ಕುಂಟುವುದಿಲ್ಲ....ಅದನ್ನು ಬರಿಯ ಸಾಹಿತ್ಯವೆಂದೇ ಸ್ವೀಕರಿಸಿದರೂ, ಅದರ ಮಹತ್ತು ಬೃಹತ್ತುಗಳು ಅಸದೃಶ ವಾದವುಗಳು. ಅದರಲ್ಲಿನ ಉದಾಹರಣೆಗಳೂ ಉಪದೇಶಗಳೂ ಕಾಲದಷ್ಟು ಅನಂತ ವಿಸ್ತಾರವಾಗಿ, ವಿಶ್ವತೋಮುಖವಾಗಿ ಬೆಳೆದಿವೆ. ಈಚಿನ ಕಾಲದ ಸಾಹಿತ್ಯಗ್ರಂಥಗಳನ್ನು ಓದುವುದರಲ್ಲಿ ಕಂಡುಬರದ ವಾಸ್ತವಾನುಭವವು ಭಾರತ ಪಠನದಿಂದ ಉಂಟಾಗುತ್ತದೆ. ಇದರ ಪಠನದಿಂದ ಮಾನವನು ಸತ್ಯಾನುಭವದಿಂದ ಹೇಗೋ ಹಾಗೆ ಬೇರೊಬ್ಬ ವ್ಯಕ್ತಿಯೇ ಆಗಿಹೋಗು ತ್ತಾನೆ.' (ಕೂಡಲಿ ಶೃಂಗಗಿರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳ 'ವೇದವ್ಯಾಸರು' ಎಂಬ ಗ್ರಂಥದಿಂದ)

## ೩. ಕನ್ನಡ ಭಾರತಗಳು—ಪಂಪ–ನಾರಣಪ್ಪ

ಸಂಸ್ಕೃತಭಾರತವು ಅನೇಕ ಕವಿಗಳಿಗೆ ಕಾವ್ಯವಸ್ತುವನ್ನು ಒದಗಿಸಿ ರುವುದು ಮಾತ್ರವೇ ಅಲ್ಲದೆ ಇಡೀ ಗ್ರಂಥವೇ ಭರತಖಂಡದ ಹಲವು ಭಾಷೆ ಗಳಿಗೆ ಪರಿವರ್ತಿತವಾಗಿದೆ. ಕನ್ನಡದಲ್ಲಂತೂ ಸಾಹಿತ್ಯದ ಅರುಣೋದಯ ವಾಗಿರುವುದೇ ಭಾರತದ ಭಾಸ್ಕರನಿಂದ. ಕನ್ನಡದ ಆದಿಕವಿ ಪಂಪ ರಚಿಸಿ ರುವ 'ವಿಕ್ರಮಾರ್ಜುನ ವಿಜಯ' ಅಥವಾ 'ಪಂಪ ಭಾರತ' ಕನ್ನಡ ಸಾಹಿತ್ಯದಲ್ಲಿ ಅದ್ವಿತೀಯವಾದ ಗ್ರಂಥ. ಪಂಪನ ತರುವಾಯ ಗ್ರಂಥರಚನೆ ಮಾಡಿದವರೆಲ್ಲರೂ ಆತನನ್ನು ಮುಕ್ತಕಂಠದಿಂದ ಹೊಗಳಿದ್ದಾರೆ; ಭಕ್ತಿ ಕುಸುಮಾಂಜಲಿಯನ್ನು ಅರ್ಪಿಸಿದ್ದಾರೆ. ಆತನ ತರುವಾಯ ಭಾರತ ರಚನೆ ಯಿಂದ ಪ್ರಖ್ಯಾತನಾಗಿರುವ ಕವಿ ನಾರಣಪ್ಪ. ಈತ ವರಕವಿ. ಈ ಇಬ್ಬರೂ ಒಂದೊಂದು ದೃಷ್ಟಿಯಿಂದ ಅದ್ವಿತೀಯರು. ಪಂಪನು ಚಾಳುಕ್ಯವಂಶದ

ಅರಿಕೇಸರಿಯ ಆಸ್ಥಾನಕವಿಯಾಗಿ, ದಂಡನಾಯಕನಾಗಿ, ಗೆಳೆಯನಾಗಿ ಬಾಳಿ ಬದುಕಿದನು. ಆತ ಬದುಕಿದ್ದುದು ಭಾರತದ ವೀರಯುಗದಲ್ಲಿ; ಕ್ಷತ್ರಿಯ ವೀರರ ಅಸ್ತ್ರಶಸ್ತ್ರಗಳ ಮಾರ್ಮೊಳಗಿನಿಂದ ಪ್ರಕ್ಷುಭಿತವಾಗಿದ್ದ ವಾತಾವರಣದಲ್ಲಿ. ಪಂಪನಿಗೆ ಕಂಠ ಹಿಡಿದರೆ ಕಾವ್ಯ, ಕತ್ತಿ ಹಿಡಿದರೆ ಕದನ ಸ್ವಾಭಾವಿಕವಾಗಿ ಹೋಗಿತ್ತು. ಆದ್ದರಿಂದ ಆತನ ಕಾವ್ಯದಲ್ಲಿ ವೀರರಸ ನೊರೆಗಟ್ಟಿ ಹರಿಯುತ್ತಿದೆ. ನಾರಣಪ್ಪನ ಸ್ವಭಾವ, ಸನ್ನಿವೇಶಗಳು ಬೇರೆ ಬಗೆಯವು. ಆತನ ಕಾಲ ಭಕ್ತಿಯುಗ. ಅನೇಕ ಶಿವಶರಣರ, ಹರಿದಾಸರ ಭಕ್ತಿಪ್ರವಾಹ ಉಕ್ಕಿ, ನಾಡಿನ ಮೂಲೆಮೂಲೆಯಲ್ಲಿಯೂ ಪ್ರವಹಿಸುತ್ತಿದ್ದ ಕಾಲ. ನಾರಣಪ್ಪನೋ ಯಾವ ರಾಜನ ಆಶ್ರಯವೂ ಇಲ್ಲದ ಒಬ್ಬ ಬಡವ. ಹೆಚ್ಚೆಂದರೆ ಒಬ್ಬ ಶಾನುಭೋಗನಾಗಿದ್ದಿರಬಹುದು. ಆತನ ಕಾವ್ಯರಚನೆಗೆ ಪ್ರೇರಕ ಶಕ್ತಿ ಗದುಗಿನ ವೀರನಾರಾಯಣ. ಆದ್ದರಿಂದ ಈತನ ಭಾರತದಲ್ಲಿ ಭಕ್ತಿಭಾವವು ಎಲ್ಲೆಲ್ಲಿಯೂ ತಾನೇ ತಾನಾಗಿ ತಾಂಡವವಾಡುತ್ತಿದೆ.

ಪಂಪ-ನಾರಣಪ್ಪ ಇವರ ಕಾವ್ಯದ ಸೊಬಗು ಬೇರೆ ಬೇರೆ ರೀತಿಯದು. ಪಂಪ ಕಾವ್ಯವನ್ನು ಬರೆದುದು ತನ್ನ ದೊರೆಯ ಮೆಚ್ಚಿಗೆಗಾಗಿ; ಆತನ ಆಸ್ಥಾನದ ಕವಿಗಳ ಮೆಚ್ಚಿಗೆಗಾಗಿ. ಆದ್ದರಿಂದ ಆತನ ಕಾವ್ಯ ಪ್ರೌಢವಾಗಿದೆ; ಪಂಡಿತಮಾನ್ಯವಾಗಿದೆ. ಆತನ ಕಾವ್ಯ ಸಮತಳ ಪ್ರದೇಶದಲ್ಲಿ ಹರಿಯುತ್ತಿರುವ ಪೂರ್ಣ ಪ್ರವಾಹದಂತೆ ಗಂಭೀರವಾದುದು. ನಾರಣಪ್ಪನ ಕಾವ್ಯ ಹಿಮಾಲಯ ಪ್ರದೇಶದಲ್ಲಿ ಪ್ರವಹಿಸುತ್ತಿರುವ ಬ್ರಹ್ಮಪುತ್ರಾ ನದಿಯಂತೆ, ಬೆಟ್ಟವನ್ನು ಹತ್ತಿ, ಪ್ರಪಾತಕ್ಕೆ ದುಮ್ಮಿಕ್ಕಿ ಭೋರ್ಗರೆಯುತ್ತಾ ಪ್ರವಹಿಸುವುದು. ಪಂಪ ತನ್ನ ಕಾವ್ಯಕ್ಕೆ ಅಲಂಕಾರ, ಛಂದಸ್ಸು ವ್ಯಾಕರಣಗಳ ಕಡಿವಾಣವಿಕ್ಕಿ ಹೆದ್ದಾರಿಯಲ್ಲಿ ನಡೆಸುತ್ತಿದ್ದರೆ, ನಾರಣಪ್ಪನ ಕವಿತಾಪಕ್ಷಿ ಸ್ವಚ್ಛಂದವಾಗಿ ಗಿರಿವನ ನದಿ ತಟಾಕಗಳ ಮೇಲೆ ಹಾರಿಹೋಗುತ್ತಿದೆ. ಪಂಪನ ಅಚ್ಚುಕಟ್ಟು, ನಾಗರಿಕತೆ ನಾರಣಪ್ಪನಲ್ಲಿ ಬರದು. ಈತನ ದೃಷ್ಟಿ ಜನಸಾಮಾನ್ಯರ ಮನೋರಂಜನೆ, ಉದ್ಧಾರ. ಇವರಿಗೆ ಅರ್ಥವಾಗುವಂತೆ ಇರುವುದಾದರೆ ಕಾವ್ಯನಿಯಮಗಳು ಹಾರಿಹೋದರೂ ಈತನಿಗೇನೂ ವ್ಯಥೆಯಿಲ್ಲ. ಆದುದರಿಂದ ಈತನು ಪಂಡಿತರಲ್ಲಿ ಪಂಪನಷ್ಟು ಪ್ರಸಿದ್ಧನಾಗಿಲ್ಲ. ಆದರೆ ಪಂಪನಿಗೆ ನಾರಣಪ್ಪನಿಗೆ ದೊರೆತ ಜನಪ್ರಿಯತೆ ದೊರೆಯಲಿಲ್ಲ.

ನೀರಿಳಿಯದ ಜನಸಾಮಾನ್ಯರ ಗಂಟಲಿನಲ್ಲಿ ಪಂಪಭಾರತದ ಕಡಬು ಹೇಗೆ ಇಳಿಯುವುದು ಸಾಧ್ಯ ?

ಕನ್ನಡ ಸಾಹಿತ್ಯದ ಈ ಇಬ್ಬರು ಮಹಾ ಕವಿಗಳಲ್ಲಿ ಇರುವ ಮತ್ತೊಂದು ದೊಡ್ಡ ವ್ಯತ್ಯಾಸವೆಂದರೆ ಇವರು ಮೂಲವನ್ನು ಬಳಸಿಕೊಂಡಿರುವ ರೀತಿ. ಇಬ್ಬರಿಗೂ ಮೂಲ ಸಂಸ್ಕೃತ ಭಾರತವೇ ಆದರೂ, ಅದರ ಸಂಗ್ರಹಕಾರ್ಯದಲ್ಲಿಯೇ ತೊಡಗಿರುವವರಾದರೂ, ಅವರಿಬ್ಬರ ದೃಷ್ಟಿಕೋನದಲ್ಲಿ ಅಜಗಜಾಂತರ ವ್ಯತ್ಯಾಸವಿದೆ. ಪಂಪ ಜೈನಧರ್ಮಕ್ಕೆ ಸೇರಿದವನು. ಭಾರತದಲ್ಲಿರುವ ಹಲವು ಘಟನೆಗಳು ಆತನ ಅಭಿರುಚಿಗೆ ಹೊಂದಿಕೊಳ್ಳಲಿಲ್ಲ. ಅಲ್ಲದೆ ಆತನು ಬರೆಯುತ್ತಿದ್ದುದು ಬರಿಯ ಭಾರತವಲ್ಲ; ಸಮಸ್ತಭಾರತ. ತನ್ನ ರಾಜನಾದ ಅರಿಕೇಸರಿಯನ್ನು, ಅರ್ಜುನನಲ್ಲಿ ಅಭೇದ ಭಾವವನ್ನು ಕಲ್ಪಿಸಿ, ಕಥಾನಾಯಕನನ್ನಾಗಿ ಮಾಡಿಕೊಂಡು ತನ್ನ ಕಾವ್ಯವನ್ನು ಸೃಷ್ಟಿಸಿದ. ತನ್ನ ಪೋಷಕನ ಬಿರುದನ್ನೇ ಕಾವ್ಯದ ಹೆಸರಿಗೆ ಬಳಸಿಕೊಂಡು ಅದನ್ನು 'ವಿಕ್ರಮಾರ್ಜುನ ವಿಜಯ' ಎಂದು ಕರೆದ. 'ಪಂಚವಲ್ಲಭೆ' ದ್ರೌಪದಿಯನ್ನು ಅರ್ಜುನನ ಧರ್ಮಪತ್ನಿಯನ್ನಾಗಿ ಮಾತ್ರ ಸ್ವೀಕರಿಸಿದ. ಜೈನ ಪುರಾಣಗಳ ಪ್ರಕಾರ ನರಕಕ್ಕೆ ಬಿದ್ದುಹೋಗುವ ಕೃಷ್ಣನನ್ನು ಮೂಲದಲ್ಲಿ ಮುಡಿಪಾಗಿಟ್ಟಿದ್ದ ದೇವಸಿಂಹಾಸನದಿಂದ ಕೆಳಕ್ಕೆಳೆದ. ಆತನ ಮಹಿಮೆ ಮಾಯೆಗಳೂ, ಗರಿಮೆ ಹಿರಿಮೆಗಳೂ ಬಂದಕಡೆ ಅವನ್ನು ಮೆಲ್ಲಗೆ ತೇಲಿಸಿಕೊಂಡು ಹೋದ. ಹೀಗೆ ಆತನು ಮಾಡಿಕೊಂಡ ಬದಲಾವಣೆಗಳು ನಿರ್ದುಷ್ಟವಾಗಿವೆಯೆಂದಾಗಲೀ, ಯಶಸ್ವಿಯಾಗಿ ನಿರ್ವಹಣಗೊಂಡಿವೆಯೆಂದಾಗಲೀ ಹೇಳುವಂತೆಯೇನೂ ಇಲ್ಲ. ಆದರೆ ಕಾವ್ಯದಲ್ಲಿ ಆತನ ಒಲವು ಎತ್ತ ಬಾಗಿದೆಯೆಂಬುದು ಇವುಗಳಿಂದ ಸ್ಪಷ್ಟವಾಗಿ ಗೋಚರವಾಗುತ್ತದೆ. ನಾರಣಪ್ಪನ ನೋಟ ಇದರಿಂದ ಭಿನ್ನವಾದುದು. ಆತನ ಕಾವ್ಯಕ್ಕೆ ಕಥಾನಾಯಕ ಶ್ರೀಕೃಷ್ಣ. ಭಗವಂತನ ಅವತಾರವಾದ ಆತ ಭೂಭಾರಹರಣಕ್ಕಾಗಿ ಟೊಂಕಕಟ್ಟಿದ್ದಾನೆ; ದುಷ್ಟಶಿಕ್ಷಣ, ಶಿಷ್ಟರಕ್ಷಣಕ್ಕಾಗಿ ಕಂಕಣಕಟ್ಟಿದ್ದಾನೆ. ಮಾನವನಂತೆ ವ್ಯವಹರಿಸುತ್ತಿದ್ದರೂ, ಆತನು ಭಗವಂತನೆಂಬ ಅರಿವು ಕಾವ್ಯದ ಎಲ್ಲ ಪಾತ್ರಗಳಿಗೂ ಇದೆ. ದುರ್ಯೋಧನನು ಕೂಡ ಆತನು ಭಗವಂತನೆಂದು ಬಲ್ಲ; ಆದರೂ ಆತನು ಹರಡಿರುವ

ಮಾಯಾ ಜಾಲವನ್ನು ಹರಿಯಲು ಶಕ್ತನಾಗಿಲ್ಲ. ಅದಮ್ಯವಾದ, ಅಪರಿಹಾರ್ಯವಾದ ಲೀಲಾಸೂತ್ರದಲ್ಲಿ ಸಿಲುಕಿ, ಕಪಟನಾಟಕ ಸೂತ್ರಧಾರಿಯಾದ ಕೃಷ್ಣನು ಕುಣಿಸಿದಂತೆ ಕುಣಿಯುತ್ತಿದ್ದಾರೆ, ಎಲ್ಲರೂ.

‘ಹತ್ತು ಕಟ್ಟುವ ಕಡೆ ಒಂದು ಮುತ್ತು ಕಟ್ಟು’ ಎನ್ನುವುದು ಪಂಪನ ಮನೋವೃತ್ತಿ. ಮಾತನಾಡಿದರೆಲ್ಲಿ ಮುತ್ತು ಸುರಿಯುವುದೋ ಎನ್ನುವ ಗಾಂಭೀರ್ಯ. ಮಾತುಗಳೆಲ್ಲವೂ ಸೂತ್ರದಂತೆ. ಎರಡು ಮಾತುಗಳಲ್ಲೇ ಒಂದು ದೊಡ್ಡ ಕಥೆಯನ್ನೆಲ್ಲಾ ಅಡಕಮಾಡಿಬಿಡುತ್ತಾನೆ. ನಾರಣಪ್ಪ ಹಾಗಲ್ಲ. ಹಿಗ್ಗಲಿಸುವುದು ಆತನ ಹುಟ್ಟುಗುಣ. ಪಂಪನು ಒಂದು ಪದ್ಯದಲ್ಲಿ ಹೇಳಿದ ಜರಾಸಂಧವಧೆ ಈತನ ಕೈಯ್ಯಲ್ಲಿ ೧೩೯ ಪದ್ಯಗಳ ಒಂದು ಸಂಧಿಯಾಗಿ ಪಸರಿಸಿದೆ. ಹತ್ತು ಹನ್ನೆರಡು ಪದ್ಯಗಳಲ್ಲಿ ಪಂಪನು ಅಡಕಮಾಡಿದ ಶಿಶುಪಾಲವಧೆಗೆ ನಾರಣಪ್ಪ ನಾಲ್ಕು ಸಂಧಿಗಳನ್ನೇ ಮೀಸಲಾಗಿಡುತ್ತಾನೆ. ಪಂಪನ ಕಾವ್ಯವನ್ನು ಓದುವಾಗ, ಓದುಗರು ಮೈಯೆಲ್ಲಾ ಕಣ್ಣಾಗಿ ಎಚ್ಚರಗೊಂಡಿರಬೇಕು; ನಿಂತು ನಿಂತು ಕಾವ್ಯರಸವನ್ನು ಚಪ್ಪರಿಸುತ್ತ ನಿಧಾನವಾಗಿ ಸಾಗಬೇಕು. ನಾರಣಪ್ಪನಲ್ಲಿ ಈ ಕಷ್ಟವಿಲ್ಲ. ಅರ್ಧ ಮೈ ಮರೆತು ಕೇಳುತ್ತಿದ್ದರೂ, ಕಥಾಸರಣಿಯನ್ನು ಅನುಸರಿಸಿಕೊಂಡು ಹೋಗಬಹುದು. ವಾಚಾಳಿಯಾದ ಈತ ಅನೇಕವೇಳೆ ಮೇರೆಮೀರಿ ಮಾತನಾಡುವುದೂ ಉಂಟು. ಇದರಿಂದ ಗಾಂಭೀರ್ಯಕ್ಕೆ ಲೋಪತರುವುದೂ ಉಂಟು. ಪಂಪ ತನ್ನ ಗಾಂಭೀರ್ಯಕ್ಕೆ ಎಲ್ಲಿಯೂ ಲಾಘವವನ್ನು ತಂದುಕೊಂಡಿಲ್ಲ.

ಪಂಪಕವಿ ತನ್ನ ಕಾವ್ಯಶಕ್ತಿಯನ್ನು ಎರಡು ಕವಲುಗಳಾಗಿ ಒಡೆದು ಪ್ರವಹಿಸಿದ ‘ಬೆಳಗುವೆನಿಲ್ಲಿ ಲೌಕಿಕಮನ್’ ಎಂದು ಭಾರತವನ್ನೂ, ಧರ್ಮಧ್ವಜವನ್ನು ಎತ್ತಿ ಹಿಡಿಯುವೆನೆಂದು ‘ಆದಿ ಪುರಾಣ’ವನ್ನೂ ಬರೆದ. ಇದರಿಂದ ಕಾವ್ಯವನ್ನು ಮುಗಿಲು ಮುಟ್ಟಿಸಲು ಸಹಾಯಕವಾಗಿದ್ದ ಧರ್ಮದೃಷ್ಟಿ, ದರ್ಶನ ಆತನ ಭಾರತಕ್ಕೆ ದೊರೆಯದಂತಾಯಿತು. ಆತನ ಕಾವ್ಯಗಂಗೆ ತುಂಬುನೊರೆಯಿಂದ ಭೋರ್ಗರೆಯುತ್ತಾ ಪ್ರವಹಿಸುತ್ತಿದ್ದರೂ, ಮುಳುಗಿ ನೋಡಿದರೆ ಆಳ ಕಡಿಮೆಯೆಂಬಂತಾಯಿತು. ನಾರಣಪ್ಪ ತನ್ನ ಶಕ್ತಿ ಸರ್ವಸ್ವವನ್ನೂ ಒಂದು ಕಾವ್ಯ ಸೃಷ್ಟಿಗಾಗಿಯೇ ಮೀಸಲಾಗಿರಿಸಿದ.

ಆತನ ಕಾವ್ಯಶಕ್ತಿಯೂ ಧರ್ಮಶಕ್ತಿಯೂ ಹುರಿಗೊಂಡೇ ಹೊರಹೊಮ್ಮಿ ದವು. ಇದರಿಂದ ಆತನ ಕಾವ್ಯ ಒಂದು ಅಲೌಕಿಕವಾದ ತೇಜಸ್ಸಿನಿಂದ ಬೆಳಗುವಂತಾಯಿತು. ಜೈನಮತದ ತತ್ವಗಳನ್ನು ಬೌದ್ಧಿಕವಾಗಿ ಒಪ್ಪಿದ ಪಂಪನಿಗೆ ಇದು ಪರಧರ್ಮದ ಕಾವ್ಯವೆಂಬ ದೃಷ್ಟಿ ಹುಟ್ಟದೆ ಹೋಗಿದ್ದರೆ—ಇದು ಬರಿಯ ಲೌಕಿಕ ಕಾವ್ಯವೆಂದು ಅಂದುಕೊಳ್ಳದಿದ್ದರೆ—ಆತನಿಗಿದ್ದ ಅದ್ಭುತ ಕವಿತಾಶಕ್ತಿಯಿಂದ ಅದೆಂತಹ ಮಹಾಕಾವ್ಯ ಉದಿಸುತ್ತಿತ್ತೊ! ಬಹುಶಃ ಮಿಲ್ಟನ್, ಡಾಂಟೆ, ಷೇಕ್ಸ್‌ಪಿಯರ್, ವ್ಯಾಸ, ವಾಲ್ಮೀಕಿಗಳಂತೆ ಆತನೂ ವಿಶ್ವಸಾಹಿತಿಯಾಗುತ್ತಿದ್ದನೆಂದು ಕಾಣುತ್ತದೆ. ನಾರಣಪ್ಪನನ್ನು ಪಂಪ ಕವಿಯೊಡನೆ ಹೋಲಿಸುವಾಗ ಈ ಪ್ರಮುಖವಾದ ವ್ಯತ್ಯಾಸವನ್ನು ಮರೆಯಬಾರದು. ನಾರಣಪ್ಪ, ಭಕ್ತಿರಸಾವೇಶದಿಂದ ಮೈಮರೆತು ಮುಗಿಲು ಮುಟ್ಟುವಂತೆ ಬರೆದಿರುವ ಭಾಗಗಳಿಗೆ ಹೋಲಿಸಲು ಕನ್ನಡ ಸಾಹಿತ್ಯದಲ್ಲಿ ಮತ್ತೊಂದು ಕಾವ್ಯವಿಲ್ಲವೆಂದು ತೋರುತ್ತದೆ.

## ೪. ಇತರ ಭಾರತ ಕರ್ತೃಗಳು

ಪಂಪ-ನಾರಣಪ್ಪ ಈ ದಿವ್ಯ ಕವಿಗಳೇ ಅಲ್ಲದೆ, ಇತರ ಕವಿಗಳೂ ಕನ್ನಡ ಭಾರತದ ಸೃಷ್ಟಿಗೆ ಕೈಹಾಕಿದ್ದಾರೆ. ಪಂಪನು ತನ್ನ ವಿಕ್ರಮಾರ್ಜುನ ವಿಜಯದಲ್ಲಿ 'ವ್ಯಾಸಮುನೀಂದ್ರ ರುಂದ್ರ ವಚನಾಮೃತವಾರ್ಧಿಯನೀಸುವೆಂ; ಕವಿ ವ್ಯಾಸನೆನೆಂಬ ಗರ್ವಮೆನಗಿಲ್ಲ' ಎಂದು ಹೇಳಿ ತನಗಿಂತಲೂ ಹಿಂದೊಬ್ಬ 'ಕವಿವ್ಯಾಸ'ನಿದ್ದನೆಂದು ಸೂಚಿಸಿದ್ದಾನೆ. ಆದರೆ ಪಂಪನ ಕಾವ್ಯ ಅದರ ಹಿಂದಿನ ಕಾವ್ಯಗಳನ್ನೆಲ್ಲಾ ಇಕ್ಕಿ ಮೆಟ್ಟಿದುದರಿಂದ ಅವನಿಗಿಂತಲೂ ಹಿಂದೆ ಬರೆದಿದ್ದ ಭಾರತಗಳು ಹೇಳ ಹೆಸರಿಲ್ಲದಂತಾಗಿವೆ.

ಪಂಪ, ನಾರಣಪ್ಪ—ಇವರ ಪ್ರತಿಭೆಯಿಂದ ಉದಿಸಿದ ಕಾವ್ಯಗಳ ಕಾಂತಿಯಿಂದ ಇತರ ಭಾರತಗಳು ಮಂಕಾಗಿ ಹೋಗಿವೆ. ಕ್ರಿ. ಶ. ೧೫೦೦ ರಲ್ಲಿ ಚಾಟುವಿಠಲನಾಥನು ಒಂದು ಭಾರತವನ್ನು ಬರೆದನೆಂದು ಪ್ರತೀತಿ ಇದೆ. ಅದರಲ್ಲಿ ಪೌಲೋಮ, ಆಸ್ತಿಕ ಪರ್ವಗಳು ಮಾತ್ರ ಈಗ ಉಪಲಬ್ಧ

ವಾಗಿವೆ. ಕ್ರಿ.ಶ. ೧೫೫೦ರ ಸುಮಾರಿನಲ್ಲಿ, ಸುಕುಮಾರ ಭಾರತಿ 'ಚಾಯಣ ಭಾರತ'ವೆಂಬ ಒಂದು ಭಾರತವನ್ನು ಬರೆದಿರುವಂತೆ ಗೊತ್ತಾಗುತ್ತದೆ. ಆದರೆ ಅದರಲ್ಲಿ ಎರಡು ಆಶ್ವಾಸಗಳು ಮಾತ್ರ ಅರೆಜೀವದಿಂದ ಉಳಿದು ಕೊಂಡಿವೆ. ನಾರಣಪ್ಪನು ಬರೆಯದೆ ಬಿಟ್ಟ ಉತ್ತರಭಾಗವನ್ನು (ಶಾಂತಿ ಪರ್ವದಿಂದ ಮುಂದಿನ ಏಳು ಪರ್ವಗಳನ್ನು) ವಿಜಯನಗರದ ಕೃಷ್ಣದೇವ ರಾಯನ ಅಪ್ಪಣೆಯಂತೆ ತಿಮ್ಮಣ್ಣಕವಿ (ಕ್ರಿ. ಶ. ೧೫೧೫) ರಚಿಸಿದ್ದಾನೆ. ಶ್ರೀನಿವಾಸಕವಿ (ಕ್ರಿ. ಶ. ೧೭೦೦) ಭಾರತದ ಸ್ತ್ರೀ ಪರ್ವವನ್ನೂ, ಲಕ್ಷ್ಮ ಕವಿ (ಕ್ರಿ. ಶ. ೧೭೩೧) ಕರ್ಣಪರ್ವದಲ್ಲಿ ನಾಲ್ಕು ಸಂಧಿಗಳು ಸೇರಿ ಮೊದಲ ಎಂಟು ಪರ್ವಗಳನ್ನೂ, ಪರಮದೇವ (ಕ್ರಿ. ಶ. ೧೭೧೧) 'ತುರಂಗಭಾರತ' ವನ್ನೂ ರಚಿಸಿದರು. 'ಚಿತ್ರಭಾರತ'ವೆಂಬ ಭಾರತವೂ ಕಳಲೆ ನಂಜರಾಜನು ಬರೆದಿರುವನೆಂದು ಪ್ರತೀತಿ ಇರುವ ಭಾರತವೂ ಉಪಲಬ್ಧವಾಗಿಲ್ಲ.

ಮೇಲೆ ಹೇಳಿದ ಭಾರತಗಳೆಲ್ಲವೂ ಪದ್ಯರೂಪದಲ್ಲಿವೆ. ಇವುಗಳಲ್ಲದೆ ಚಿಕ್ಕದೇವರಾಜ ಭಾರತವೆಂಬ ಉತ್ತರಪರ್ವಗಳ ಟೀಕೆಯನ್ನು ಒಳಗೊಂಡ ಭಾರತವೂ, ಜಕ್ಕಭೂಪಾಲನ (ಕ್ರಿ. ಶ. ೧೬೩೦) 'ಭಾರತಕಥಾಸಂಗ್ರಹ' ವೂ ಮಧ್ವಗುರು ರಚಿತವಾದ ಭಾರತ ತಾತ್ಪರ್ಯನಿರ್ಣಯಕ್ಕೆ ವಾದಿ ರಾಜರು (ಕ್ರಿ. ಶ. ೧೫೭೦) ಬರೆದಿರುವ ಕನ್ನಡ ವ್ಯಾಖ್ಯಾನವೂ ಮುಮ್ಮಡಿ ಕೃಷ್ಣರಾಜ ಒಡೆಯರು (ಕ್ರಿ.ಶ. ೧೭೯೪-೧೮೬೮) ಬರೆದಿರುವ 'ಕೃಷ್ಣರಾಜ ವಾಣೀವಿಲಾಸ ಭಾರತ'ವೂ ಪಂಡಿತ ದೇವಶಿಖಾಮಣಿ ಅಳಸಿಂಗಾಚಾರ್ಯರ 'ಶ್ರೀ ಮಹಾಭಾರತವೂ-ಕರ್ಣಾಟಕ ವಚನವೂ' ಗದ್ಯಗ್ರಂಥಗಳಾಗಿವೆ. ಇವುಗಳಲ್ಲಿ ಪಂಡಿತರ ಗ್ರಂಥವನ್ನು ಬಿಟ್ಟರೆ 'ಕೃಷ್ಣರಾಜ ವಾಣೀವಿಲಾಸ ಭಾರತ'ವು ಸರ್ವ ಜನಾದರಣೀಯವಾದುದು; ಸಂಸ್ಕೃತ ಭಾರತವನ್ನು ಆದ್ಯಂತವಾಗಿ ಕನ್ನಡಿಸತಕ್ಕದ್ದು. ಸರಳವಾದ ಕನ್ನಡದಲ್ಲಿ ಮತ್ತಾವ ಭಾರ ತವೂ ಇಷ್ಟು ವಿಸ್ತಾರವಾಗಿ ಬರೆಯಲ್ಪಟ್ಟಿಲ್ಲ. ಇದಲ್ಲದೆ ಈಚೆಗೆ ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳು ಸಂಸ್ಕೃತ ಮಹಾಭಾರತದ ಸಾರವನ್ನು ಭಟ್ಟಿ ಯಿಳಿಸಿ 'ವಚನಭಾರತ'ವೆಂಬ ಗದ್ಯಗ್ರಂಥವನ್ನು ಪ್ರಕಟಿಸಿದ್ದಾರೆ. ಆರು ತಿಂಗಳಲ್ಲಿ ಬರೆದ ಗ್ರಂಥ ಇದು. ಒಂದೇ ನೋಟದಲ್ಲಿ ಭಾರತದ ಕಥೆ, ಅದರ ಸಾಹಿತ್ಯದ ಸೊಬಗು, ದರ್ಶನ, ಧರ್ಮ, ನೀತಿ ಇವೆಲ್ಲ ಇಲ್ಲಿ ದೊರಕುತ್ತವೆ.

ವೈದಿಕ ಪಂಥದವರು ಬರೆದಿರುವ ಕಥೆಯನ್ನು ಕೆಲವು ಜೈನ ಕವಿಗಳು ಅಲ್ಲಲ್ಲಿ ಹಲವು ವ್ಯತ್ಯಾಸಗಳನ್ನು ಮಾಡಿ ಬಳಸಿಕೊಂಡಿದ್ದಾರೆ. ಅಂತಹವುಗಳಲ್ಲಿ ಸಾಳ್ವನು (ಕ್ರಿ. ಶ. ೧೫೫೦) ಬರೆದಿರುವ ಭಾರತ ಬಹಳ ಪ್ರಸಿದ್ಧವಾದುದು. ಇದಲ್ಲದೆ 'ಜಿನಭಾರತ'ವೆಂಬ ಮತ್ತೊಂದು ಭಾರತವೂ ಇದೆ. ಆದರೆ ಇವು ಹೆಚ್ಚು ಜನಾನುರಾಗವನ್ನು ಸಂಪಾದಿಸಲು ಶಕ್ತವಾಗಿಲ್ಲ. ಸಂಪ್ರದಾಯಬದ್ಧವಾದ ಕಥೆಯಲ್ಲಿ ಮಾಡಿಕೊಂಡಿರುವ ಬದಲಾವಣೆಗಳು ಒಂದು ಬಗೆಯ ವಿಲಕ್ಷಣವಾದಂತಾಗಿವೆಯಲ್ಲದೆ ಕಲಾದೃಷ್ಟಿಯಿಂದಲೂ ಆ ಬದಲಾವಣೆಗಳು ಅಷ್ಟು ನಿರ್ದುಷ್ಟವಾಗಿವೆಯೆಂದು ಹೇಳುವಂತಿಲ್ಲ.

ಇವುಗಳಲ್ಲದೆ ಭೀಮ ದುರ್ಯೋಧನರ ಗದಾಯುದ್ಧವನ್ನು ವರ್ಣಿಸುವ ರನ್ನಮಹಾಕವಿಯ 'ಗದಾಯುದ್ಧಂ,' ಕಿರಾತಾರ್ಜುನೀಯ ಪ್ರಸಂಗವನ್ನು ವರ್ಣಿಸುವ 'ಷಡಕ್ಷರಿಯ ಶಬರಶಂಕರ ವಿಲಾಸಂ', ಪಾಂಡವರ ಅಶ್ವಮೇಧಯಾಗವನ್ನು ವರ್ಣಿಸುವ ಲಕ್ಷ್ಮೀಶನ 'ಜೈಮಿನಿ ಭಾರತ' ಇವು ಪ್ರೌಢವೂ, ಆದರೂ ಜನಪ್ರಿಯವೂ ಆದ ಕಾವ್ಯಗಳಾಗಿವೆ.

ಭಾರತದ ಕಥಾಭಾಗವನ್ನು ವಸ್ತುವನ್ನಾಗಿ ಸ್ವೀಕರಿಸಿರುವ ನೂರಾರು ಕಾವ್ಯಗಳಿವೆ. ಅಲ್ಲದೆ ಕೃಷ್ಣನನ್ನು ಕಥಾನಾಯಕನನ್ನಾಗಿ ಆಯ್ದುಕೊಂಡು ಬರೆದಿರುವ ಕಾವ್ಯಗಳಲ್ಲೆಲ್ಲಾ ಭಾರತದ ಕಥೆ ಅಷ್ಟು ಇಷ್ಟು ಬರುವುದು ಅನಿವಾರ್ಯ. ಆದರೆ ಈ ಕಾವ್ಯಗಳಲ್ಲಿ ಯಾವುವೂ ಪಂಪ ನಾರಣಪ್ಪ ಇವರ ಕಾವ್ಯಗಳಿಗೆ ಸಮಾನವಾಗುವಂತಿಲ್ಲ. ಅವರಿಬ್ಬರೂ ಸೂರ್ಯಚಂದ್ರರಂತೆ ಕನ್ನಡ ಸಾಹಿತ್ಯಾಕಾಶದಲ್ಲಿ ಸ್ಥಾಯಿಯಾಗಿರುವರು.



## ೫. ಅರಣ್ಯಪರ್ವದ ಕಥೆ

ವನಪ್ರಯಾಣಕ್ಕೆ ಹೊರಟ ಪಾಂಡವರು ಗಂಗಾತೀರದಲ್ಲಿ ದ್ರೋಣ, ಭೀಷ್ಮ, ವಿದುರ ಮೊದಲಾದ ಬಾಂಧವರನ್ನೆಲ್ಲಾ ಬೀಳ್ಕೊಟ್ಟು ಗಂಗಾತೀರದ ಉತ್ತರಭಾಗದಲ್ಲಿ ಬಿಡಾರಮಾಡಿದರು. ಹಲವು ಬ್ರಾಹ್ಮಣರು ಎಷ್ಟು ಹೇಳಿದರೂ ನಿಲ್ಲದೆ ಪಾಂಡವರನ್ನೇ ಆಶ್ರಯಿಸಿ ಅವರ ಹಿಂದೆ ಬಂದರು. ಇದನ್ನು ಕಂಡು ಧರ್ಮರಾಯನ ಕರುಳು ಕರಗಿತು, ಕಣ್ಣೀರು ತುಂಬಿದವನಾಗಿ ಈ ಬ್ರಾಹ್ಮಣರನ್ನೆಲ್ಲ ಅಶನವಸನಗಳಿಂದ ತೃಪ್ತಿಪಡಿಸುವುದು ಹೇಗೆಂದು ಚಿಂತಾಮಗ್ನನಾದನು. "ದುರ್ದೆಸೆಗೆ ಇಳಿದ ನನ್ನನ್ನು ಆಶ್ರಯಿಸಿ ನೀವು ಯಾವ ಸೌಭಾಗ್ಯವನ್ನು ಹೊಂದುವಿರಿ?" ಎಂದು ವಿಷಾದದಿಂದ ಹೇಳಿಕೊಂಡ ರಾಜನಿಗೆ, ಬ್ರಾಹ್ಮಣರ ಮುಂದಾಳುವಾದ ಧೌಮ್ಯನು ಸಮಾಧಾನ ಹೇಳುತ್ತ "ಅಯ್ಯಾ ಮಹಾರಾಜ, ಈ ಬಗೆಯಾದ ಚಿಂತೆಗೆ ಕಾರಣವಿಲ್ಲ. ಸೂರ್ಯನನ್ನು ಧ್ಯಾನಮಾಡಿದರೆ ಇಷ್ಟಸಿದ್ಧಿಯಾಗುತ್ತದೆ" ಎಂದು ತಿಳಿಸಿದನು. ಆತನ ಬೋಧನೆಯಂತೆ ಧರ್ಮರಾಯನು ಆದಿತ್ಯನನ್ನು ಜಪಿಸಿ ಮೆಚ್ಚಿಸಿದನು. ಪ್ರತ್ಯಕ್ಷನಾದ ಸೂರ್ಯದೇವನು ಬಂಗಾರದ ತಟ್ಟೆಯೊಂದನ್ನು ಕೊಟ್ಟು "ಅಯ್ಯಾ, ಇದು ಅನ್ನಪಾನಗಳಿಗೆ ತವನಿಧಿ. ನಿನ್ನ ಮಡದಿ ಅಡಿಗೆಯನ್ನು ಮಾಡಿ ಶತಸಹಸ್ರ ಜನಗಳಿಗೆ ಈ ತಟ್ಟೆಯಲ್ಲಿ ಬಡಿಸಿದರೂ ಅದು ಸವೆಯದು. ಹೀಗೆ ಅತಿಥಿಗಳನ್ನು ತೃಪ್ತಿಪಡಿಸಿದನಂತರ ನೀವೂ ಊಟಮಾಡಿ. ಕಡೆಗೆ ದ್ರೌಪದಿ ಊಟಮಾಡಲಿ. ನಿಮಗೆ ಸಮಸ್ತ ಸನ್ಮಂಗಳ ಲಭಿಸಲಿ" ಎಂದು ಹೇಳಿ ಅಂತರ್ಧಾನನಾದನು. ಧರ್ಮರಾಯನು ಇದರಿಂದ ಸಂತಸಗೊಂಡವನಾಗಿ, ತನ್ನ ಸೋದರರೊಡನೆ ಮುನಿಬ್ರಾಹ್ಮಣರಿಗೆ ದಾಸೋಹವನ್ನು ನೀಡುತ್ತ ಸುಖದಿಂದಿರುತ್ತಿದ್ದನು.

ಇತ್ತ ಕೌರವನ ಬಳಿಗೆ ಮೈತ್ರೇಯನೆಂಬ ಋಷಿಯು ಬಂದು ಆತನ ಆತಿಥ್ಯದಿಂದ ಸಂತುಷ್ಟನಾಗಿ "ಅಯ್ಯ, ನಿನ್ನ ಅಖಂಡ ಸೌಖ್ಯಕ್ಕೆ ಒಂದೇ ಒಂದು ಕೊರತೆ. ಪಾಂಡವರನ್ನು ಜೂಜಿನಲ್ಲಿ ಸೋಲಿಸಿ ಅಡವಿಗಟ್ಟಿ ಕೆಡಕು ಮಾಡಿಕೊಂಡೆ. ಇನ್ನಾದರೂ ಅವರನ್ನು ಹಿಂದಕ್ಕೆ ಕರೆಯಿಸಿ ಅರ್ಧರಾಜ್ಯವನ್ನು ಕೊಡು" ಎಂದು ಬುದ್ಧಿ ಹೇಳಿದನು. ಇದರಿಂದ ಕನಲಿ ಕೆಂಗೆಂಡವಾದ ಕೌರವನು ತೊಡೆಗಳನ್ನು ಚಪ್ಪರಿಸುತ್ತ "ಶತ್ರುವಿಗೆ ರಾಜ್ಯವನ್ನು

ಕೊಡುವುದೇ ?" ಎಂದು ಕೆಡೆನುಡಿದನು. ಇದರಿಂದ ಕುಪಿತರಾದ ಮೈತ್ರೇಯರು ತೊಡೆಗಳನ್ನು ಭೀಮಸೇನನು ಯುದ್ಧದಲ್ಲಿ ಮುರಿಯಲಿ ಎಂದು ಶಾಪಕೊಟ್ಟರು. ಇದನ್ನು ಕೇಳಿ ಧೃತರಾಷ್ಟ್ರನು ಅಲ್ಲಿಗೆ ಓಡಿಬಂದು, ಋಷಿಯನ್ನು ಸಂತವಿಸಲು ಪ್ರಯತ್ನಿಸಿದನು. ಆದರೆ ರೋಷಗೊಂಡಿದ್ದ ಋಷಿ ಅದಕ್ಕೆ ಅವಕಾಶವಿಲ್ಲದಂತೆ "ನಮ್ಮಯ ನುಡಿಗೆ ಮರುಮಾತಿಲ್ಲ" ಎಂದು ನಿಷ್ಠುರವಾಗಿ ನುಡಿದು ತನ್ನ ಆಶ್ರಮಕ್ಕೆ ಹಿಂತಿರುಗಿದನು.

ಅತ್ತ ಧರ್ಮರಾಯನು ತನ್ನ ಪರಿವಾರದೊಡನೆ ಪ್ರಯಾಣವನ್ನು ಮುಂದುವರಿಸಿ ಕಾಮ್ಯಕವೆಂಬ ಘೋರಾರಣ್ಯವನ್ನು ಪ್ರವೇಶಿಸಿದನು. ಅಲ್ಲಿ ಕಿರ್ಮೀರನೆಂಬ ಒಬ್ಬ ಭಯಂಕರ ರಾಕ್ಷಸನು ವಾಸವಾಗಿದ್ದನು. ಮಾನವರ ಸೊಗಡನ್ನು ಹಿಡಿದು ಮಾಂಸದಾಸೆಯಿಂದ ಅವನು ಓಡಿಬಂದು ಪರಿವಾರವನ್ನು ಅಡ್ಡಗಟ್ಟಿದನು. ಅವನ ಕೆಂಗಣ್ಣು, ಅವನ ಮಿಂಚಿನ ದಾಡೆಗಳು, ಅವನ ಭಯಂಕರ ಆಕಾರ-ಇವುಗಳನ್ನು ಕಂಡು ಪರಿವಾರದವರೆಲ್ಲ ನಡುಗಿ ನಿಂತರು. ದ್ರೌಪದಿಯು ಭೀಮಾರ್ಜುನರ ಹಿಂದೆ ಅಡಗಿಕೊಂಡಳು. ನೆತ್ತರು ನೆತ್ತರೆಂದು ನಾಲಗೆಯನ್ನು ಸವರಿಕೊಳ್ಳುತ್ತ ಬರುತ್ತಿದ್ದ ರಕ್ಕಸನು ನೀವಾರೆಂದು ಪ್ರಶ್ನಿಸಿ ಪಾಂಡವರೆಂದು ತಿಳಿಯುತ್ತಲೇ ಪ್ರತೀಕಾರಮನನಾದನು. ಅವನು ಹಿಡಿಂಬನ ಬಂಧು, ಆ ಬಂಧುವನ್ನು ಭೀಮ ಕೊಂದಿದ್ದನು, ಅದರ ಸೇಡನ್ನು ಈಗ ತೀರಿಸಿಕೊಳ್ಳಲು ಅವನು ಸಿದ್ಧನಾದನು. ಭೀಮಸೇನನು ಅವನಿಗಿದಿರಾಗಿ ಅವನನ್ನು ದಿಗ್ದೇವತೆಗಳಿಗೆ ಬಲಿಗೊಡಲು ನಿಶ್ಚಯಿಸಿದನು. ಹೀಗೆ ಮುಂದೆ ಬಂದ ಭೀಮನ ನೆತ್ತಿಯಮೇಲೆ ರಕ್ಕಸನು ಬಲವಾಗಿ ಗುದ್ದಿದನು. ಸಿಡಿಲು ಬಡಿದಂತಾಯಿತು. ಆದರೆ ಭೀಮನು ಅದನ್ನು ಲೆಕ್ಕಿಸದೆ, ಅವನ ಹೊಡೆತವನ್ನು ಹಿಂತಿರುಗಿಸಿದನು. ಆ ಹೊಡೆತಕ್ಕೆ ರಕ್ಕಸನು ಮೇಣದ ಬೊಂಬೆಯಂತೆ ಕೆಳಗಿಳಿದು ಹೋದನು. ಕ್ಷಣಮಾತ್ರದಲ್ಲಿ ಅವನು ರಕ್ತವನ್ನು ಕಾರಿ ಕೆಳಗೆ ಬಿದ್ದು ಸತ್ತು ಹೋದನು. ಇದನ್ನು ಕಂಡ ಬ್ರಾಹ್ಮಣರು ಸಂತೋಷದಿಂದ ಕುಣಿದಾಡಿದರು. ಅಲ್ಲಿಯೇ ಪರ್ಣಶಾಲೆಗಳನ್ನು ಕಟ್ಟಿಕೊಂಡು ಅವರೆಲ್ಲರೂ ನೆಲಸಿದರು. ಪಾಂಡವರಿಗೂ ಅಲ್ಲಿಯೇ ಬಿಡಾರವಾಯಿತು. ಈ ಘೋರ ಕಾಂತಾರವು ಆತನ ಸಾಮ್ರಾಜ್ಯ ವೈಭವವನ್ನು ಮರೆಸಿತು.

ಪಾಂಡವರು ವನವಾಸವನ್ನು ಕೈಕೊಂಡ ಸುದ್ದಿ ದ್ವಾರಕೆಯನ್ನು ಮುಟ್ಟಿತು. ಕೇಳಿ ಶ್ರೀ ಕೃಷ್ಣನು ಒಮ್ಮೆ ನಿಟ್ಟುಸಿರುಬಿಟ್ಟು, ಒಡನೆಯೇ ಪಾಂಡವರ ಬಳಿಗೆ ಪ್ರಯಾಣ ಹೊರಟನು. ಆತನೊಡನೆ ಯಾದವ ಸಮೂಹವೆಲ್ಲವೂ ಹೊರಟಿತು. ಹಲವು ಪ್ರಯಾಣಗಳಿಂದ ಆತನು ಕಾಮ್ಯಕ ವನವನ್ನು ಸೇರಿದನು. ಧರ್ಮರಾಯನು ಬ್ರಾಹ್ಮಣರೊಡನೆ ಅವರನ್ನೆಲ್ಲ ಇದಿರ್ಗೊಂಡು, ಸತ್ಕರಿಸಿದಮೇಲೆ ಶ್ರೀ ಕೃಷ್ಣನ ಪಾದಗಳ ಮೇಲೆ ಅವಿರಳವಾಗಿ ಕಂಬನಿಯನ್ನು ಸುರಿಸಿದನು. ಕರುಣಾಳುವಾದ ಶ್ರೀ ಕೃಷ್ಣನು ಆತನನ್ನು ಸಮಾಧಾನ ಪಡಿಸಿ ತನ್ನ ಪೀತಾಂಬರದ ಸೆರಗಿನಿಂದ ಆತನ ಕಣ್ಣೀರನ್ನು ಒರಸಿದನು. ಉಳಿದ ಸೋದರರನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಕಂಡು ಸಮಾಧಾನಪಡಿಸಿದನು. ಅಷ್ಟರಲ್ಲಿ ದ್ರೌಪದಿ ಆತನ ಬಳಿಗೆ ಬಂದು ಆತನ ಪಾದಗಳಲ್ಲಿ ಕುಸಿದು ಬಿದ್ದಳು. ಕಣ್ಣುಗಳಲ್ಲಿ ಕಣ್ಣೀರು ಉಕ್ಕಿತು. ಕಂದಿದ ಮುಖದಿಂದ ಆತನನ್ನು ಕುರಿತು "ಕೃಷ್ಣ, ಮುಕುಂದ, ನೀನೆ ನನಗೆ ದಿಕ್ಕು. ನೀನು ಅನಾಥನಾಥ. ಹಿಂದೆ ಸೆಳೆಸೀರೆಯ ಕಾಲದಲ್ಲಿ ನೀನು ನನ್ನನ್ನು ಉದ್ಧರಿಸಿದೆ. ನನ್ನ ಅಭಿಮಾನ ನಿನ್ನದು." ಎಂದು ಹಲುಬಿದಳು. ಶ್ರೀ ಕೃಷ್ಣನು ಆಕೆಯನ್ನು ಮೇಲಕ್ಕೆತ್ತಿ ಕಣ್ಣೀರನ್ನೊರೆಸುತ್ತ "ತಂಗಿ, ನೀನು ಬಹು ನೊಂದೆಯಮ್ಮ. ಸಮಾಧಾನ ಮಾಡಿಕೊ. ಆ ಕೌರವನ ವಂಶ ಉರಿದುಹೋಯಿತೆಂದು ತಿಳಿದುಕೊ. ಈ ವನವಾಸದ ಅವಧಿ ಮುಗಿಯುವವರೆಗೆ ಸ್ವಲ್ಪ ಸಮಾಧಾನ ಮಾಡಿಕೊ." ಎಂದು ಹೇಳಿದನು. ದ್ರೌಪದಿಗೆ ಕೃಷ್ಣನಲ್ಲಿ ಅಗಾಧವಾದ ಭಕ್ತಿ. ಆತನು ಸಕಲ ಚರಾಚರದ ಚೇತನರೂಪನೆಂದೂ ಆಕೆಯ ನಂಬಿಕೆ. ಆದ್ದರಿಂದ ಆಕೆ ಶ್ರೀಕೃಷ್ಣನನ್ನು ಕುರಿತು "ಅನಾಥರಕ್ಷಕ, ನನ್ನ ಪ್ರತಿಜ್ಞೆ ನಿನಗೆ ಗೊತ್ತಿದೆ. ಬಿಚ್ಚಿದ ಈ ನನ್ನ ಕೂದಲನ್ನು ದುಶ್ಶಾಸನನ ವಕ್ಷಸ್ಥಳದಲ್ಲಿ ಉಕ್ಕಿಬರುವ ರಕ್ತದಲ್ಲಿ ಅದ್ದಿದ ಹೊರತು ಕಟ್ಟುವಂತಿಲ್ಲವಲ್ಲವೆ? ಆ ಪ್ರತಿಜ್ಞೆಯನ್ನು ನೀನೇ ನೆರವೇರಿಸಿಕೊಡಬೇಕು" ಎಂದು ನಿವೇದಿಸಿಕೊಂಡಳು. ಶ್ರೀ ಕೃಷ್ಣನು ಅದನ್ನು ಅಗತ್ಯವಾಗಿ ನೆರವೇರಿಸುವೆನೆಂಬ ನಂಬುಗೆಯನ್ನು ನೀಡಿ "ಹೇ ತಪಸ್ವಿನಿ, ಕೌರವರೆಂಬ ಕುನ್ನಿಗಳು ನಿನ್ನನ್ನು ಕೆರಳಿಸಿ ಭರತವಂಶವನ್ನೆಲ್ಲಾ ಫಲಿತಕದಳಿಯಂತೆ ವಿನಾಶಕ್ಕೆ ಒಡ್ಡಿದರು. ಕುರುಡನಾದ ಧೃತರಾಷ್ಟ್ರನು ಕಾಣದೆ

ಹೋದರೂ, ಭೀಷ್ಮ, ವಿದುರಾದಿಗಳಿಗೆ ಬುದ್ಧಿ ಕುರುಡಾಯಿತೇ ? ಆಯಿತು, ಧರ್ಮರಾಜನ ಭಾಷೆ ಸಲ್ಲುವಂತೆ ಈ ವನವಾಸ ಮುಗಿದುಹೋಗಲಿ, ನಿನ್ನ ಪ್ರತಿಜ್ಞೆಗೆ ನಾನು ಹೊಣೆಯಾಗಿ ಅದನ್ನು ನಡಸಿಕೊಡುತ್ತೇನೆ" ಎಂದು ಸಮಾಧಾನ ಮಾಡಿದನು. ಅನಂತರ ಪಾಂಡವರಲ್ಲಿ ಒಬ್ಬೊಬ್ಬರನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಸಮಾಧಾನಗೊಳಿಸಿ, ಮುನಿ ಸಮೂಹಕ್ಕೆ ಉಚಿತ ವಾದ ಮನ್ನಣೆಯನ್ನು ಸಲ್ಲಿಸಿ ಸುಭದ್ರೆಯನ್ನೂ ಆಕೆಯ ಮಗನಾದ ಅಭಿಮನ್ಯುವನ್ನೂ ತನ್ನ ಜೊತೆಯಲ್ಲಿ ಕರೆದುಕೊಂಡು ದ್ವಾರಕೆಗೆ ಹಿಂದಿರುಗಿದನು.

ಇದಾದ ಕೆಲವು ಕಾಲದಮೇಲೆ ಪಾಂಡವರೆಲ್ಲರೂ ಆ ವನದಿಂದ ಮುಂದಕ್ಕೆ ಪ್ರಯಾಣಮಾಡಿ ದ್ವೈತಕಾನನವನ್ನು ಪ್ರವೇಶಿಸಿದರು. ಅಲ್ಲಿಗೆ ಒಂದು ದಿನ ಭೂಸುರಶ್ರೀಕಂಠನಾದ ವೇದವ್ಯಾಸನು ಆಗಮಿಸಿದನು. ಋಷಿಗಳೆಲ್ಲರೂ ಧರ್ಮರಾಯನನ್ನು ಮುಂದಿಟ್ಟುಕೊಂಡು ಆತನನ್ನು ಇದಿರುಗೊಂಡು ಸತ್ಕರಿಸಿದರು. ವೇದವ್ಯಾಸರು ಅವರನ್ನು ಉಚಿತೋಕ್ತಿಗಳಿಂದ ಸಂಭಾವಿಸಿ ಧರ್ಮರಾಜನೊಡನೆ ಆತನ ಪರ್ಣಶಾಲೆಗೆ ನಡೆತಂದರು. ಅವರಿಬ್ಬರೇ ಏಕಾಂತದಲ್ಲಿದ್ದಾಗ ಮುನಿಯು ಈಶ್ವರ ಬೀಜಮಂತ್ರವನ್ನು ಆತನಿಗೆ ಉಪದೇಶಿಸಿ ಅದನ್ನು ಅರ್ಜುನನಿಗೆ ರಹಸ್ಯದಲ್ಲಿ ಬೋಧಿಸುವುದೆಂದೂ ಅರ್ಜುನನು ಆ ಮಂತ್ರವನ್ನು ಜಪಿಸುತ್ತಾ ಇಂದ್ರಕೀಲ ಪರ್ವತದಲ್ಲಿ ಪರಮೇಶ್ವರನನ್ನು ಕುರಿತು ತಪಸ್ಸು ಮಾಡುವುದೆಂದೂ ವಿಧಿಸಿದನು. "ನಿಮ್ಮ ಇಷ್ಟಾರ್ಥಗಳೆಲ್ಲವೂ ಶಂಭುವಿನ ಕೃಪೆಯಿಂದ ಸಿದ್ಧಿಸುತ್ತವೆ. ಈ ಮಂತ್ರವು ವಿರೋಧಿಗಳಿಗೆ ಕುಠಾರಪ್ರಾಯವಾದುದು ; ಸಕಲ ಪುರುಷಾರ್ಥಗಳೂ ಸಾಧಿತವಾಗಿ ಪಾಪವಿಮೋಚನೆಯಾಗುತ್ತದೆ" ಎಂದು ಬೋಧಿಸಿದನು. ಅನಂತರ ಭೀಮಾರ್ಜುನಾದಿ ಪಾಂಡುಪುತ್ರರ ವಂದನೆಗಳನ್ನು ಕೈಕೊಂಡು ಅವರನ್ನು ಆಶೀರ್ವದಿಸಿ ತನ್ನ ಆಶ್ರಮಕ್ಕೆ ಹಿಂದಿರುಗಿದನು.

ವೇದವ್ಯಾಸಮುನಿ ಅತ್ತ ಹೋಗುತ್ತಲೇ, ಇತ್ತ ಧರ್ಮರಾಯನು ಅರ್ಜುನನನ್ನು ತನ್ನ ಬಳಿಗೆ ಕರೆದು ವೇದವ್ಯಾಸರು ನೀಡಿದ್ದ ಮಂತ್ರಾಕ್ಷರವನ್ನು ಆತನಿಗೆ ಉಪದೇಶಿಸಿ ಒಡನೆಯೇ ಇಂದ್ರಕೀಲಕ್ಕೆ ಹೊರಡುವಂತೆ ನೇಮಿಸಿದನು. ಅರ್ಜುನನು ಅಣ್ಣನ ಮಾತಿಗೆ ಹಸಾದವೆಂದು ಹೇಳಿ, ಆತನಿಗೂ ಭೀಮಸೇನನಿಗೂ ಋಷಿಜನಕ್ಕೂ ನಮಸ್ಕರಿಸಿ,ಅವರ ಆಶೀರ್ವಾದದೊ

ಡನೆ ಪ್ರಯಾಣ ಹೊರಟನು. ಬೆನ್ನಿನಲ್ಲಿ ಬತ್ತಳಿಕೆ, ಕೈಲಿ ಬಿಲ್ಲು, ಸೊಂಟದಲ್ಲಿ ಖಡ್ಗ ಕಠಾರಿಗಳು-ಇವುಗಳಿಂದ ಅಲಂಕೃತನಾಗಿ ಹಲವು ದಿನಗಳ ಪ್ರಯಾಣದಿಂದ ಇಂದ್ರಕೀಲ ಪರ್ವತವನ್ನು ಬಂದು ಮುಟ್ಟಿದನು. ತಪಸ್ಸಿಗೆ ತಕ್ಕ ಸ್ಥಳವನ್ನು ಹುಡುಕುತ್ತಿರುವಾಗ ಆತನು ನಿಂತಿದ್ದ ಎಡೆಯೇ ಅತ್ಯುತ್ತಮವಾದುದೆಂದು ಅಶರೀರವಾಣಿಯಾಯಿತು. ಅರ್ಜುನನು ಅಲ್ಲಿಯೇ ನಿಂತು, ಮರುದಿನದ ಉದಯದಲ್ಲಿ ಮೇಲಕ್ಕೆದ್ದು, ಸಮೀಪದ ಸರಸಿಯಲ್ಲಿ ಸ್ನಾನಮಾಡಿ, ಸೂರ್ಯನಿಗೆ ಅರ್ಘ್ಯವಿತ್ತು ಭಾವಶುದ್ಧಿಯಿಂದ ತಪಸ್ಸುಮಾಡಲು ಆರಂಭಿಸಿದನು. ಕಣ್ಣುಗಳು ಅರೆಮುಚ್ಚಿವೆ, ತೋಳುಗಳೆರಡೂ ಸಿಡಿದಾಗಿ ಮೇಲಕ್ಕೆ ಚಾಚಿವೆ, ತುಟಿಯಲ್ಲಿ ಮಂತ್ರಾಕ್ಷರಗಳು ಮಿನುಗುತ್ತಿವೆ, ಅರ್ಜುನನು ತುದಿಗಾಲಲ್ಲಿ ನಿಂತು ತಪಸ್ಸು ಮಾಡುತ್ತಿದ್ದಾನೆ. ಈ ಕ್ಷತ್ರಿಯ ತಪಸ್ವಿಯ ಬೆನ್ನಲ್ಲಿ ಬಿಲ್ಲು ಬತ್ತಳಿಕೆಗಳು, ಸೊಂಟದಲ್ಲಿ ಒರೆಯೊಡನೆ ಇರುವ ಕತ್ತಿ ಕಠಾರಿಗಳು. ಈ ವಿಲಕ್ಷಣವೇಷದ ತಪಸ್ವಿ ಸ್ಥಿರಚಿತ್ತದಿಂದ ಧ್ಯಾನಮಗ್ನನಾಗುತ್ತಿದ್ದಂತೆಯೇ ದೇವೇಂದ್ರನು ಬ್ರಾಹ್ಮಣ ವೇಷದಿಂದ ಆತನ ಬಳಿಗೆ ಬಂದು, ಆತನನ್ನು ಕುರಿತು "ಅಯ್ಯಾ ನೀನೆಂತಹ ತಪಸ್ವಿ, ತಪಸ್ಸಿಗೂ ನೀನು ಧರಿಸಿರುವ ಈ ಬಿಲ್ಲುಬಾಣಗಳಿಗೂ ಯಾವ ಸಂಬಂಧ? ನಿನ್ನ ಮೈಮೇಲೆ ಬಳಿದಿರುವ ಈ ವಿಭೂತಿಗೂ, ನೀನು ಧರಿಸಿರುವ ಕವಚ ಸೀಸಕಗಳಿಗೂ, ಯಾವ ಹೊಂದಿಕೆ? ಇದೇನು ತಪಸ್ಸೋ, ಡೊಂಬರ ವಿದ್ಯೆಯೋ? ನೀನೆಂತಹ ಋಷಿ?" ಎಂದನು. ಅರ್ಜುನನು ಕಣ್ಣುಬಿಟ್ಟು ಅವನನ್ನು ಕಂಡು "ಅಯ್ಯಾ ಈ ಬಹಿರಂಗದ ಚಿಹ್ನೆಗಳಲ್ಲಿ ವ್ಯತ್ಯಾಸವಿದ್ದರೆ ಅದರಿಂದೇನು ಕುಂದು? ನನ್ನ ಹೃದಯಪೀಠದಲ್ಲಿ ಇಂದುಮೌಳಿಯನ್ನು ಪ್ರತಿಷ್ಠಿಸಿ ಪೂಜಿಸುತ್ತಿದ್ದೇನೆ" ಎಂದು ಉತ್ತರಗೊಟ್ಟನು. ಈ ಉತ್ತರದಿಂದ ಸುಪ್ರೀತನಾದ ದೇವೇಂದ್ರನು ಆತನಿಗೆ ಸ್ವಸ್ವರೂಪವನ್ನು ತೋರಿಸಿ ಅವನ ಅಭೀಷ್ಟ ಸಿದ್ಧಿಸಲೆಂದು ಹರಸಿ ಹಿಂತಿರುಗಿದನು. ಈ ಪ್ರೋತ್ಸಾಹದ ನುಡಿಗಳಿಂದ ಅರ್ಜುನನ ಉತ್ಸಾಹ ಇಮ್ಮಡಿಯಾಯಿತು. ಒಂದು ತಿಂಗಳು ಕಾಲ ಮೂರು ದಿವಕ್ಕೊಮ್ಮೊಮ್ಮೆ ಫಲಾಹಾರಮಾಡುತ್ತ ತಪಸ್ಸನ್ನು ಆಚರಿಸುತ್ತಿದ್ದನು, ಆಮೇಲೆ ಆರು ದಿನಕ್ಕೊಂದು ಸಲ ಫಲಾಹಾರ ಮಾಡಲು ಪ್ರಾರಂಭಿಸಿದನು. ಹಾಗೆ ಎರಡು ತಿಂಗಳು ಕಳೆದಮೇಲೆ ಹನ್ನೆರಡು ದಿನಗಳಿಗೊಮ್ಮೆ

ಕಂದಮೂಲಗಳನ್ನು ಸೇವಿಸುತ್ತಿದ್ದನು. ಮೂರು ತಿಂಗಳಾದಮೇಲೆ ಅದನ್ನೂ ತಪ್ಪಿಸಿ ಕೇವಲ ತರಗೆಲೆಗಳನ್ನು ತಿನ್ನುತ್ತಾ ನಾಲ್ಕು ಮಾಸಗಳನ್ನು ಕಳೆದನು. ಅಲ್ಲಿಂದ ಮುಂದೆ ಗಾಳಿಯೇ ಅವನ ಆಹಾರವಾಯಿತು. ಬರಬರುತ್ತ ಅವನ ತಪೋಗ್ನಿ ಜ್ವಾಲೆಯಿಂದ ಸಮೀಪದ ತಪೋಧನರೆಲ್ಲರೂ ತಲ್ಲಣಿಸಿಹೋದರು. ಅವರ ಅನುಷ್ಠಾನಗಳೆಲ್ಲ ನಿಂತುಹೋದವು. ಅವರೆಲ್ಲರೂ ಶಿವನ ಬಳಿಗೆ ಓಡಿ ಹೋಗಿ ತಮ್ಮ ದುರವಸ್ಥೆಯನ್ನು ಹೇಳಿಕೊಂಡರು. "ಪರಮ ಕೃಪಾಳು, ಪರಮೇಶ್ವರ, ಆರ್ತರಾದ ನಮ್ಮನ್ನು ರಕ್ಷಿಸು; ನಮ್ಮ ಸಮಾಧಿ, ಸ್ಥೈರಣೆ, ಶಮದಮಾದಿಗಳೆಲ್ಲ ಪೊಳ್ಳಾಗಿಹೋದವು. ವನಭೂಮಿಯೆಲ್ಲವೂ ಕಾದು- ಹೋಗಿ ತರುಗುಲ್ಮಾದಿಗಳು ಒಣಗಿಹೋಗಿವೆ. ಒಬ್ಬ ಮಹಾ ತಪಸ್ವಿಯು- ದೆಸೆಯಿಂದ ನಮ್ಮ ನಿತ್ಯವಿಧಿಯೆಲ್ಲ ನಿಂತುಹೋಗಿದೆ. ಆತನು ಋಷಿಯು ಹುದೋ ಅಲ್ಲವೋ! ಬಿಲ್ಲು ಬತ್ತಳಿಕೆಗಳು ಹೆಗಲಿನಲ್ಲಿ, ಬೆರಳುಗಳಲ್ಲಿ ದರ್ಭೆ, ತಲೆಯಲ್ಲಿ ಜಟೆ. ನಾವು ಮಾತನಾಡಿದರೆ ಋಷಿಯಲ್ಲಿ ಅಸೂಯೆಗೊಂಡವ ರೆಂದು ನಮಗೆ ದುರ್ನಾಮ ಬಂದೀತು; ಆದರೆ ಆ ತಪೋಗ್ನಿಯ ಜ್ವಾಲೆಯು ಅಸಹ್ಯವಾದ್ದರಿಂದ ಹೇಳಿಕೊಳ್ಳಲೇಬೇಕಾಗಿದೆ. ನಮ್ಮ ತಪಸ್ಸಿಗೆ ವಿಘ್ನ ವಾಗಿರುವ ಆತನನ್ನು ನೀನು ಅಲ್ಲಿಂದ ಬಡಿದೆಬ್ಬಿಸಬೇಕಾಗಿದೆ; ನಾವು ಹೇಳಿ ಕೊಳ್ಳದೆ ವಿಧಿಯಿಲ್ಲ" ಎಂದರು. ಪರಮೇಶ್ವರನು ಜ್ಞಾನಮುದ್ರೆಯಿಂದ ಎಲ್ಲವನ್ನೂ ಅರಿತವನಾಗಿ ಮುಗುಳುನಗೆ ನಗುತ್ತ "ಅಯ್ಯ ಋಷಿಗಳೆ, ಹೆದರ ಬೇಡಿ. ನಾವು ಆತನನ್ನು ಎಬ್ಬಿಸಿ ನಿಮ್ಮ ತಪೋವನವನ್ನು ನಿಮಗೆ ತೆರವು ಮಾಡಿಕೊಡುತ್ತೇವೆ. ನಿಮ್ಮ ಆಶ್ರಮಕ್ಕೆ ಹಿಂತಿರುಗಿ. ಯಾವ ಭಯವೂ ಬೇಡ" ಎಂದು ಸಮಾಧಾನ ಮಾಡಿದನು.

ಪರಮೇಶ್ವರನು ಅತ್ತ ಋಷಿಗಳನ್ನು ಬೀಳ್ಕೊಟ್ಟು ಇತ್ತ ನಂದೀಶ್ವರ ನನ್ನು ಕರೆದು, ತನ್ನ ಭೂತಕೋಟಿಯನ್ನು ಬರಮಾಡಿದನು. ತಕ್ಷಣವೇ ಎಲ್ಲರೂ ಬೇಡವೇಷದಿಂದ ಬೇಟೆಗೆ ಹೊರಡಬೇಕೆಂದು ಅವರಿಗೆ ಅಪ್ಪಣೆಯಾ ಯಿತು. ಪರಮೇಶ್ವರನೂ ಪಾರ್ವತಿಯೊಡನೆ ಶಬರವೇಷವನ್ನು ಧರಿಸಿ ಧನು ರ್ಬಾಣಗಳನ್ನು ತೆಗೆದುಕೊಂಡನು. ನಂದೀಶ, ವೀರಕ, ದೇವಲಕ, ರೇಣುಕ, ಮಹೋದರ, ದಾವಶಿಖಿಮುಖ, ವೀರಭದ್ರ ಮೊದಲಾದ ಭೂತಗಣ ಶಿವ ನನ್ನು ಹಿಂಬಾಲಿಸಿತು. ಸಪ್ತಮಾತೃಕೆಯರೂ, ದಿಕ್ಕನ್ನಿಕೆಯರೂ, ಮಂತ್ರ

ದೇವತೆಯರೂ ಪರಮೇಶ್ವರಿಯ ಹಿಂಬಾಲಕರಾದರು. ಹದವಿಲ್ಲುಗಳು, ಬಡಿಕೋಲುಗಳು, ಬಲೆಗಳು, ನಾಯಿಗಳು ಮೊದಲಾದ ಬೇಟೆಯ ಪರಿಕರಗಳು ಸಿದ್ಧವಾದವು. ನಿಜವಾಗಿಯೂ ಕೈಲಾಸವಾಸಿಯ ಈ ಲೀಲೆ ರೋಮಾಂಚಕಾರಕವಾದುದು. ಭಕ್ತಜನ ಸಂದರ್ಶನಾರ್ಥವಾಗಿ ಪರಮೇಶ್ವರನು ತನ್ನ ಪರಿವಾರದೊಡನೆ ಇಂದ್ರಕೀಲ ಪರ್ವತಕ್ಕೆ ಬೇಟೆಗೆಂದು ಹೊರಟನು. ಅಲ್ಲಿ ಮೂಕದಾನವನೆಂಬ ರಕ್ಕಸನೊಬ್ಬನು ವರಾಹ ರೂಪದಿಂದ ವಾಸಿಸುತ್ತಿದ್ದನು. ಕಪಟ ಕಿರಾತನ ಪರಿವಾರವು ಸಂಭ್ರಮದಿಂದ ಅಡವಿಯನ್ನೆಲ್ಲ ಸೋಸುತ್ತಿರಲು, ಮೂಕದಾನವನು ಖತಿಗೊಂಡು ಆ ಗಿರಿಕಂದರದಲ್ಲಿದ್ದ ಕಿರಾತರ ಮೇಲೆ ಬಿದ್ದನು. ಕಿರಾತರು ಅದರ ಮೇಲೆ ನಾಯಿಗಳನ್ನು ಛೂಬಿಟ್ಟು ಅದನ್ನು ಗಾಯಗೊಳಿಸಿದರು. ನೂರಾರು ಗಾಯಗಳಿಂದ ನೊಂದ ಹಂದಿಯು ಅಲ್ಲಿಂದ ಓಡಿಹೋಗಲು ಹವಣಿಸುತ್ತಿರುವಾಗ ಅದು ಶಿವನ ಕಣ್ಣಿಗೆ ಬಿತ್ತು. ಶೂಲಿಯು ಇದೇ ಸಮಯವೆಂದು ಒಂದು ಬಾಣವನ್ನು ಹೂಡಿ ಆ ಸೂಕರನನ್ನು ಹೊಡೆದನು. ಆ ಬಾಣವು ತನ್ನ ಪಕ್ಕೆಯಲ್ಲಿ ಸಿಕ್ಕಿಕೊಂಡಿರಲಾಗಿ ಹಂದಿಯು ಘೀಳಿಡುತ್ತಾ ಕಣೆಯೊಡನೆ ಧನಂಜಯನ ಬಳಿಗೆ ಓಡಿಹೋಯಿತು. ಅದನ್ನು ಕಾಣುತ್ತಲೇ ಅರ್ಜುನನು ಗಾಂಡಿವದಲ್ಲಿ ಬಾಣವನ್ನು ಹೂಡಿ ಅದನ್ನು ಹೊಡೆದನು. ಆ ಪೆಟ್ಟಿಗೆ ಹಂದಿ ಸತ್ತು ಬಿತ್ತು. ಅಷ್ಟರಲ್ಲಿ ಕಿರಾತರೂಪಿಯಾದ ಪರಮೇಶ್ವರನು ಅಲ್ಲಿಗೆ ಬಂದನು. ಹಂದಿಯನ್ನು ಹೊಡೆದವರು ಯಾರೆಂಬ ವಿಚಾರದಲ್ಲಿ ಆತನಿಗೂ ಅರ್ಜುನನಿಗೂ ವಿವಾದ ಹುಟ್ಟಿತು. ವಿವಾದ ವಿರೋಧಕ್ಕೆ ತಿರುಗಿ ಅವರು ಪರಸ್ಪರ ಕಾಳಗಕ್ಕೆ ಇಳಿದರು. ಅರ್ಜುನನು ಶಿವನನ್ನು ಕುರಿತು "ಎಲವೋ ಕಿರಾತ, ಅನ್ಯಾಯವಾಗಿ ನನ್ನ ಬಾಣದ ಬಲೆಗೆ ಮೃಗವಾಗಬೇಡ. ಅಡವಿಯಲ್ಲಿರುವ ನರಿ ಮೊಲ ಹುಲ್ಲೆ ಹರಿಣಗಳಲ್ಲಿ ನಿನ್ನ ಪರಾಕ್ರಮವನ್ನು ತೋರಿಸು; ನಾವು ನಿನಗೆ ಹೆದರುವವರಲ್ಲ. ನಿಮ್ಮ ಬೇಡಪಡೆಗೆ ಯಾವನಾದರೂ ಯಜಮಾನನಿದ್ದರೆ ಅವನನ್ನು ಕರೆದುಕೊಂಡು ಬಾ ಹೋಗು" ಎಂದು ಹಂಗಿಸಿದನು. ಪರಮೇಶ್ವರನು ಮುಗುಳುನಗೆ ನಗುತ್ತ ಆ ಭಕ್ತನ ಧೈರ್ಯವನ್ನೂ, ಭುಜಬಲವನ್ನೂ ಪಾರ್ವತಿಗೆ ವಿವರಿಸಿದನು. ಅನಂತರ ಅರ್ಜುನನ ಕಡೆ ತಿರುಗಿ "ಅಯ್ಯಾ ತಮ್ಮಡಿ, ನೀನು ನಿಜವಾಗಿಯೂ ತಪಸ್ವಿಯಾದರೆ ಈ ಖಡ್ಗವೇಕೆ?

ಈ ಬಿಲ್ಲು ಬಾಣಗಳೇಕೆ? ಇದೇನು ನಿನ್ನ ದುರವಸ್ಥೆ ?" ಎಂದು ಕೇಳಿದನು- ಅರ್ಜುನನು ಅವನ ಮಾತನ್ನು ನಿರ್ಲಕ್ಷಿಸುತ್ತ "ನಿನಗೇತಕ್ಕೊ ಈ ತಪಸ್ವಿನ ಚಿಂತೆ? ಇದು ವಿವೇಕ ಶಾಸ್ತ್ರವಿಚಾರ; ನೀನು ಅಡವಿಯ ಬೇಡ, ನಿನ್ನದು ಮೃಗಸಂಹಾರವೃತ್ತಿ. ಆದ್ದರಿಂದ ತಪಸ್ವಿನ ಗೋಜಿಗೆ ಹೋಗದೆ ಯಾರಾದರೂ ನಿಮ್ಮಲ್ಲಿ ಶೂರರಿದ್ದರೆ ಅವರನ್ನು ಕರೆಸು. ಏಕಾಕಿಯಾಗಿ ನಿನಗೆ ನನ್ನೊಡನೆ ಯುದ್ಧ ಹೂಡುವುದು ಶುದ್ಧ ಅವಿವೇಕ" ಎಂದು ಜರೆದನು. ಬೇಡವೇಷಧಾರಿಯೇ ಹೊರತು ಶಿವನೇನೂ ಕಾಡುಬೇಡನಲ್ಲ. ಆದ್ದರಿಂದ ಆತನು ಸೇರಿಗೆ ಸವಾಸೇರಾಗಿ ಪ್ರತ್ಯುತ್ತರ ಕೊಟ್ಟನು. "ಅಯ್ಯ ನೀವು ಶಾಸ್ತ್ರಜ್ಞರು, ನಾವು ಶಸ್ತ್ರಜ್ಞರು. ನೀವು ಬಲುಹುಳ್ಳವರು, ನಾವು ನಿಮ್ಮೊಡನೆ ಯುದ್ಧ ಮಾಡಲಾರೆವು. ನಿಮ್ಮಲ್ಲಿ ಯಾವನಾದರೂ ಶಸ್ತ್ರಜ್ಞನಾದ ಋಷಿಯಿದ್ದರೆ ಆತನನ್ನು ಕರಸಿ; ನಾವು ಆತನೊಡನೆ ಯುದ್ಧ ಮಾಡುತ್ತೇವೆ." ಶಿವನ ಈ ಮಾತುಗಳನ್ನು ಕೇಳಿ ಅರ್ಜುನನು ತನ್ನ ಸ್ವರೂಪವನ್ನು ವಿವರಿಸಿದನು—"ಅಯ್ಯ ಕಿರಾತ ನಾವು ತಪಸ್ವಿಗಳೆಂಬುದು ಮೇಲೆಯೇ ಎದ್ದು ಕಾಣುತ್ತದೆ, ನೋಡು; ಜಟೆ, ಮೃಗಾಜಿನ, ಭಸ್ಮಗಳನ್ನು ಧರಿಸಿದ ಪರಶಿವನು ಧನುರ್ಬಾಣ ಖಡ್ಗಗಳನ್ನು ಧರಿಸಿದ್ದಾನೆ. ನಾವು ಆತನ ಶಿಷ್ಯರು" ಶಿವನು ಅವನ ಮಾತನ್ನು ಲಕ್ಷಿಸದವನಂತೆ ನಟಿಸುತ್ತ ತನ್ನ ಬೇಟೆಯನ್ನು ಏನುಮಾಡಿದರೂ ಬಿಡುವುದಿಲ್ಲವೆಂದು ಹಠ ಹಿಡಿದನು. ಇದರಿಂದ ಅರ್ಜುನನ ಕ್ಷಾತ್ರ ಕೆರಳಿತು. ಕಣ್ಣಲ್ಲಿ ಕೆಂಡವನ್ನು ಸುರಿಸುತ್ತ ಆತನು "ಹಾಗಾದರೆ ಇದನ್ನು ತೆಗೆದುಕೊ" ಎಂದು ಬಾಣವನ್ನು ಸೆಳೆದು ಆ ಶಬರನ ಮೇಲೆ ಪ್ರಯೋಗಿಸಿದನು. ಅದರ ಹಿಂದೆಯೇ ಪುಂಖಾನುಪುಂಖವಾಗಿ ಬಾಣಗಳ ಮಳೆ ಸುರಿಯಿತು.

ಏನಾದರೇನು? ಮಂಜು ಮುಸುಕಿದ ಮಾತ್ರಕ್ಕೆ ಪರ್ವತ ಅಂಜುವುದೇ? ಅರ್ಜುನನು ಬಾಣಗಳ ಕಾಲುವೆಯಲ್ಲಿ ಜಾಹ್ನವೀದರನಾದ ಪರಮೇಶ್ವರನು ಜಾರಿ ಬೀಳುತ್ತಾನೆಯೇ? ಆತನು ಸ್ಥಿರನಾಗಿ ನಿಂತಿದ್ದನು. ಆದರೆ ಸುತ್ತಲೂ ನಿಂತಿದ್ದ ಆತನ ಪರಿವಾರದವರೆಲ್ಲರೂ ಕಡುಕೋಪದಿಂದ ಕಬ್ಬರಿಸಿದರು. ಪರಮೇಶ್ವರನು ಅವರನ್ನು ಕುರಿತು "ಅಯ್ಯಾ ಗಜಬಜಿಸಬೇಡಿ, ಈ ಧನಂಜಯ ನಿಮಗಿಂತಲೂ ನೂರು ಮಡಿ ಹಿತವನಾದವನು

ನಮಗೆ" ಎಂದು ಹೇಳಿದನು. ಇತ್ತ ಅರ್ಜುನನು ಶಿವನಮೇಲೆ ಬಾಣಗಳ ಮಳೆಯನ್ನು ಕರೆದು ಕರೆದು ಸೋತುಹೋದನು.ಆತನು ಬಿಟ್ಟ ಮಂತ್ರಾಸ್ತ್ರಗಳೆಲ್ಲ ಶಿವನಿಗೆ ಗ್ರಾಸವಾದುವು. ಇದನ್ನು ಕಂಡು ಅರ್ಜುನನು ಬೆಕ್ಕಸಗೊಂಡನು. ಅವನ ಅಕ್ಷಯಬಾಣವು ಬತ್ತಿಹೋಯಿತು. ಶಿವನ ಸೇವೆಗೆ ಕಿರಾತನೊಬ್ಬನು ಅಡ್ಡಿಯಾದನೆಂಬ ರೋಷದಿಂದ ಮುಂಗಾಣದೆ ಹೋದ ಅರ್ಜುನನು ಬಿಲ್ಲಿನಿಂದ ಅವನನ್ನು ಅಪ್ಪಳಿಸಿದನು. ಆದರೇನು ? ಶಿವನು ಮುಗುಳುನಗೆ ನಗುತ್ತ ಅವನ ಕೈಯಿಂದ ಆ ಬಿಲ್ಲನ್ನು ಕಿತ್ತುಕೊಂಡನು. ಈ ಅಪಮಾನದಿಂದ ಅರ್ಜುನನ ತಾಮಸ ಮತ್ತೂ ಹೆಚ್ಚಾಯಿತು. ಅದೂ ವ್ಯರ್ಥವಾಗಲು ಮರದ ಕೊಂಬೆಗಳಿಂದ, ಕಲ್ಲುಗುಂಡುಗಳಿಂದ ಅವನನ್ನು ಘಾತಿಸ ಹೊರಟನು. ಆದರೆ ಎಲ್ಲವೂ ವ್ಯರ್ಥ. ಶಿವನು ಅವನನ್ನು ಹಂಗಿಸುವ ದನಿಯಲ್ಲಿ "ಅಯ್ಯೊ ಮರುಳು ತಮ್ಮಟ್ಟಿ, ಆಯುಧವಿದ್ದರೆ ಕೊಂಡು ಬಾರಯ್ಯ" ಎಂದನು. ಪಾಪ! ಅರ್ಜುನ ಇನ್ನೆಲ್ಲಿಂದ ಆಯುಧವನ್ನು ತಂದಾನು ? ಆದರೂ ತನ್ನ ಠೇಂಕಾರವನ್ನು ಬಿಡದೆ "ಎಲವೊ ಬೇಡ, ನಿನಗೆ ಆಯುಧವೇಕೆ ? ಈ ನನ್ನ ವಜ್ರಮುಷ್ಟಿಯೇ ನಿನಗೆ ಸಾಕು" ಹೀಗೆಂದು ಹೇಳಿ ಶಿವನೊಡನೆ ಖಾಡಾಖಾಡಿಯಾಗಿ ಯುದ್ಧಕ್ಕೆ ನಿಂತನು. ಪರಶಿವನು ಪಾರ್ವತಿಗೆ ಅವನನ್ನು ತೋರಿಸುತ್ತಾ ಹೋರಾಟಕ್ಕೆ ಆರಂಭಿಸಿದನು. ಸ್ವಲ್ಪಕಾಲ ಹೊರಾಡಿ ಅರ್ಜುನನು ಈಶ್ವರವನ ಎದೆಗೆ ಬಲವಾಗಿ ತಿವಿದನು. ಶಿವನೂ ಸ್ವಲ್ಪ ಅವನನ್ನು ತಿವಿದನು. ತತ್ತರಿಸಿದ ಪಾರ್ಥನು ಮತ್ತೆ ಶಿವನ ಮೇಲೆ ಬಿದ್ದನು. ಆದರೂ ಆತನ ಕೈ ಸಾಗುವಂತಿರಲಿಲ್ಲ. ತನ್ನಿದಿರಾಳಿಯು ದೇವೇಂದ್ರನೋ, ಹರಿಯೋ, ಪರಮೇಶ್ವರನೋ ಇರಬೇಕೆಂದು ಪಾರ್ಥನ ಮನಸ್ಸು ತರ್ಕಿಸಿತು. ಆದರೂ ಕ್ಷಾತ್ರ ಧರ್ಮವನ್ನು ಹಿಡಿದು ಹೋರಾಟವನ್ನು ಮುಂದುವರಿಸಿದನು. ಆದರೆ ಶಿವನ ಒಂದು ಪೆಟ್ಟಿಗೆ ಅವನ ಮೂಗು ಬಾಯಿಗಳಲ್ಲಿ ನೆತ್ತರು ಸುರಿಯಿತು. ತನ್ನ ಕಾರ್ಯಕ್ಕಾಗಿ ಪರಮೇಶ್ವರನೇ ಮಿಡುಕುವಂತಾಯಿತು. ಈ ವೇಳೆಗೆ ಅರ್ಜುನನ ಗರ್ವ ಸೋರಿಹೋಯಿತು. ಆತನ ಶಕ್ತಿಯೂ ಕುಂದಿಹೋಗಿತ್ತು. ಬಳಲಿ ಬೆಂಡಾಗಿದ್ದ ಅರ್ಜುನನು ತನ್ನ ಆರಾಧ್ಯದೈವವನ್ನು ನೊರೆಹೊಕ್ಕು ಆತನ ಪ್ರಸಾದಾನುಗ್ರಹದಿಂದ ಕಿರಾತನನ್ನು ಗೆಲ್ಲುವೆನೆಂದು ನಿಶ್ಚಯಿಸಿದನು. ಸಮೀಪದಲ್ಲಿಯೇ ಇದ್ದ

ಮರಳಿನಿಂದ ಲಿಂಗವನ್ನು ಮಾಡಿ ಸಗುಣಾರಾಧನೆಯಿಂದ ಶಿವನನ್ನು ಪೂಜಿಸಿದನು. "ಹೇ ಪರಮೇಶ್ವರ, ಈ ಶಬರನು ನನ್ನನ್ನು ಗೆದ್ದಿದ್ದಾನೆ, ಅವನ ಪರಾಕ್ರಮದಿಂದ ನನ್ನ ಬಿಂಕ ಭಂಗವಾಯಿತು. ನೀನು ನನ್ನ ಆರಾಧ್ಯ ದೈವವಾಗಿರಲು ಹೀಗಾದರೆ ಹೇಗೆ? ಇವನನ್ನು ಸೋಲಿಸುವ ಶಕ್ತಿಯನ್ನು ನನಗೆ ಅನುಗ್ರಹಿಸು" ಎಂದು ಬೇಡಿದನು. ಇನ್ನು ಕ್ಷಣಮಾತ್ರದಲ್ಲಿ ಆ ಶಬರನನ್ನು ಸೋಲಿಸಿ, ಅವನ ಪ್ರಾಣವನ್ನೇ ಹಿಂಡುವೆನೆಂಬ ಉತ್ಸಾಹದಿಂದ ಅವನ ಬಳಿಗೆ ಬಂದು ನೋಡುತ್ತಾನೆ. ಆಶ್ಚರ್ಯದ ಮೇಲೆ ಆಶ್ಚರ್ಯ! ತಾನು ಮರಳಿನ ಲಿಂಗಕ್ಕೆ ಪೂಜಿಸಿದ್ದ ಪುಷ್ಪಗಳೆಲ್ಲ ಕಿರಾತನ ಮಂಡೆಯಲ್ಲಿ ಕಾಣಿಸಿದವು. ಅರ್ಜುನನು ಸ್ತಂಭೀಭೂತನಾಗಿ ಮತ್ತೊಮ್ಮೆ ಶಿವನನ್ನು ಬಗೆಬಗೆಯ ಪುಷ್ಪಗಳಿಂದ ಪೂಜಿಸಿ ಹಿಂತಿರುಗಿ ನೋಡುತ್ತಾನೆ; ಬೇಡನ ನೆತ್ತಿಯಮೇಲೆ ತಾನು ಪೂಜಿಸಿದ ಹೂಗಳು! ಲಿಂಗದಮೇಲೆ ಹೂಗಳೆ ಇಲ್ಲ! ಅರ್ಜುನನು ತನ್ನ ಕಣ್ಣುಗಳನ್ನೇ ತಾನು ನಂಬದಂತಾದನು. ಕ್ಷಣ ಮಾತ್ರದಲ್ಲಿ ಆತನ ಅಜ್ಞಾನ ಹಾರಿಹೋಯಿತು. ಚತುರ್ದಶಭುವನಕರ್ತೃ ವಾದ ಪರಶಿವನೇ ಕಿರಾತ ವೇಷದಿಂದ ಅಲ್ಲಿ ಸುಳಿದಿರುವನೆಂಬುದು ಅರ್ಥ ವಾಯಿತು. ಆತನ ಮನಸ್ಸು ನಡುಗಿ ದೇಹವೆಲ್ಲವೂ ರೋಮಾಂಚಗೊಂಡಿತು. ಅರ್ಜುನನು ಪಶ್ಚಾತ್ತಾಪದಿಂದ ಮರುಗಿ ಕೊರಗಿದನು. ನಾದ ಬಿಂದು ಕಳಾತೀತನಾದ, ಸೃಷ್ಟಿಸ್ಥಿತಿಲಯಕರ್ತನಾದ ಪರಾತ್ಪರ ವಸ್ತುವಿನೊಡನೆ ತಾನು ಸೆಣಸಿದುದಕ್ಕಾಗಿ ಅವನು ಅನುತಾಪ ಪಡುತ್ತಿದ್ದನು. ಆತನ ಮನೋವೇದನೆಯನ್ನು ನೋಡಿ ಶಶಿಮೌಳಿಯ ಮನ ಕರಗಿತು; ಸ್ವಸ್ವರೂಪದಿಂದ ಆತನಿದಿರಿಗೆ ದೃಗ್ಗೋಚರನಾದನು. ಆತನೊಡನೆಯೇ ಪರಮೇಶ್ವರಿಯೂ ಗಣಸಮೂಹವೂ ಪ್ರತ್ಯಕ್ಷರಾದರು. ಆಕಾಶದಲ್ಲಿ ದುಂದುಭಿಗಳು ಮೊಳಗಿದವು; ದೇವತೆಗಳು ಹೂಮಳೆಗರೆದರು. ಅರ್ಜುನನು ತನ್ನ ಆರಾಧ್ಯದೈವಕ್ಕೆ ಸಾಷ್ಟಾಂಗವೆರಗಿ "ಹೇ ಕಾರುಣ್ಯನಿಧಿ ಈ ಮತಿಗೆಟ್ಟ ಮಾನವಗುರಿ ಮಾಡಿದ ಅಪರಾಧವನ್ನು ಮರೆತುಬಿಡು, ನನ್ನನ್ನು ಕರುಣಿಸು, ಉದ್ಧರಿಸು" ಎಂದು ಬೇಡಿದನು. ಪರಶಿವನು ಆತನ ಮಂಡೆಯನ್ನು ಹಿಡಿದೆತ್ತಿ, ಬರಸೆಳೆದು ಆಲಿಂಗಿಸಿದನು. "ಮಗು, ಘೋರ ತಪಸ್ಸಿನಲ್ಲಿ ಎಷ್ಟು ನೊಂದೆಯಲ್ಲ!" ಎಂದು ಅವನ ಮೈದಡವಿ ಮುದ್ದಾಡಿದನು. ಅವನು

ಮಾಡಿದ ಉಪಹತಿಯೆಂಬುದು ತನ್ನ ಅರ್ಚನೆಯೆಂದು ನಂಬುಗೆಗೊಟ್ಟನು. ಪೂರ್ವಜನ್ಮದಲ್ಲಿ ಅರ್ಜುನನು ನರನೆಂಬ ಋಷಿಯಾಗಿದ್ದುದನ್ನು ಅವನಿಗೆ ಜ್ಞಾಪಿಸಿ ಖಡ್ಗಶರಧನುಗಳನ್ನು ಅವನಿಗೆ ನೀಡಿ ವರವನ್ನು ಬೇಡುವಂತೆ ಆಹ್ವಾನಿಸಿದನು. ಅರ್ಜುನನು "ಭಕ್ತರಿಗೆ ಸುಲಭನಾದ ಹೇ ಭಗವಂತಾ, ನನಗೆ ಪಾಶುಪತಾಸ್ತ್ರವನ್ನು ನೀಡಿ ಉದ್ಧರಿಸು" ಎಂದು ಬೇಡಿದನು. ಪರಶಿವನು "ತಥಾಸ್ತು" ಎಂದು ಹೇಳುತ್ತಲೇ ಅರ್ಜುನನು ಸರಸ್ಸಿನಲ್ಲಿ ಮಿಂದು ಮಡಿಯುಟ್ಟು ಮಂತ್ರೋಚ್ಚರಣಪೂರ್ವಕವಾಗಿ ಆ ಮಹಾಸ್ತ್ರವನ್ನು ಪರಿಗ್ರಹಿಸಿದನು. ಅನಂತರ ಪಾರ್ವತೀದೇವಿಯು ಆತನಿಗೆ ಅಂಜನಾಸ್ತ್ರವನ್ನು ಕೊಟ್ಟಳು; ಗಣಪ ಷಣ್ಮುಖರೂ ಆತನಿಗೆ ತಮ್ಮ ಅಸ್ತ್ರಗಳನ್ನು ಅನುಗ್ರಹಿಸಿ ಜಯವಾಗಲೆಂದು ಹರಸಿದರು. ಪರಶಿವನ ಕೋಮಲ ಪಾಣಿಪಲ್ಲವದ ಸ್ಪರ್ಶದಿಂದ ಅರ್ಜುನನು ಪರೆಬಿಟ್ಟ ಹಾವಿನಂತೆ ಕಂಗೊಳಿಸಿದನು. "ನೀ ನಿನ್ನ ಶಕ್ರನ ಪುರಿಗೆ ನಡೆ" ಎಂದು ಅರ್ಜುನನಿಗೆ ಅಪ್ಪಣೆಯಿತ್ತು ಶಿವನು ರಜತಗಿರಿಗೆ ಹಿಂತಿರುಗಿದನು.

ಅರ್ಜುನನು ಪರಶಿವನ ಅನುಗ್ರಹವಾದುದನ್ನು ಒಂದು ಹೊಂಗನಸೆಂಬಂತೆ ಪರಿಭಾವಿಸುತ್ತಿರುವಷ್ಟರಲ್ಲಿಯೇ ಸ್ವರ್ಗಲೋಕದಿಂದ ರಥವೊಂದು ಕೆಳಗಿಳಿದು ಬಂತು. ಸಾರಥಿಯಾದ ಮಾತಲಿಯು ಅರ್ಜುನನನ್ನು ಆ ದಿವ್ಯ ರಥದಲ್ಲಿ ಕುಳ್ಳಿರಿಸಿಕೊಂಡು ಬೇರೆ ಬೇರೆ ಲೋಕಗಳನ್ನು ತೋರಿಸುತ್ತಾ ಅಮರಾವತಿಗೆ ಕರೆತಂದನು. ಅಸಾಧಾರಣವಾದ ಈ ಘಟನೆಯಿಂತೆ ಇಡೀ ಸ್ವರ್ಗವೇ ಸಂಭ್ರಮಯುಕ್ತವಾಯಿತು. ದೇವೇಂದ್ರನು ತನ್ನ ಮಗನಾದ ಅರ್ಜುನನನ್ನು ಅತ್ಯಂತ ಸಂಭ್ರಮದಿಂದ ಇದಿರ್ಗೊಂಡು, ಕರೆತಂದು, ತನ್ನ ಸಿಂಹಾಸನಾರ್ಧದಲ್ಲಿ ಕುಳ್ಳಿರಿಸಿಕೊಂಡನು. ಈ ನೂತನಾತಿಥಿಯ ಸಂತೋಷಕ್ಕಾಗಿ ನೃತ್ಯ, ಗೀತಗಳ ಸುಗ್ಗಿಯಾಯಿತು. ಅಮರರ ಆಸ್ಥಾನವೆಲ್ಲವೂ ಗಾನರಸದಲ್ಲಿ ಮುಳುಗಿಹೋಯಿತು. ದಿವ್ಯವಾದ ಈ ದೃಶ್ಯದಿಂದ ಅರ್ಜುನನು ಮೈಮರೆತನು. ಅದರಲ್ಲಿಯೂ ಕುಸುಮಾಯುಧನ ಖಂಡೆಯದಂತೆ ಇದ್ದ ಊರ್ವಶಿಯ ನರ್ತನ ಅವನ ಮನವನ್ನು ಮೋಹಿಸಿತು. ಎವೆಯಿಕ್ಕದೆ ಅವಳನ್ನು ನೋಡುತ್ತಾ ಇದ್ದನು. ಇದನ್ನು ದೇವೇಂದ್ರನು ಗಮನಿಸಿದನು. ದೇವತೆಗಳಿಗೆ ಸಹಜವಾದ ಭೋಗಜೀವನದ ಕಾತುರತೆಯನ್ನು ಆತನು

ಅರ್ಜುನನಲ್ಲಿಯೂ ನಿರೀಕ್ಷಿಸಿದನು. ಆದ್ದರಿಂದಲೇ ಆತನು ಭೋಜನಾನಂತರದಲ್ಲಿ ಅರ್ಜುನನನ್ನು ಶಯ್ಯಾಗೃಹಕ್ಕೆ ಕಳುಹಿಸಿ, ಆತನ ಭೋಗ ಸಂತೃಪ್ತಿಗಾಗಿ ಊರ್ವಶಿಯನ್ನು ಅಲ್ಲಿಗೆ ಅಟ್ಟಿದನು.

"ನಮಗೆ ಅರ್ಜುನನು ಮಗ; ನೀನು ಇಂದು ನಮಗೆ ಸೊಸೆಯಾಗಬೇಕು" ಎಂದು ಹೇಳಿ ಕಳುಹಿಸಿದ ದೇವೇಂದ್ರನ ಅಪ್ಪಣೆಯಂತೆ ಊರ್ವಶಿ ದಿವ್ಯಾಲಂಕಾರಭರಿತೆಯಾಗಿ ಅರ್ಜುನನ ಬಳಿಗೆ ಹೋದಳು. ಅಪ್ಸರಕನ್ಯೆಯರಲ್ಲಿ ಅಗ್ರಗಣ್ಯಳಾದ ಊರ್ವಶಿ ಮೊದಲೇ ದಿವ್ಯಸುಂದರಿ. ಅದರಮೇಲೆ ಎಣ್ಣೆಮಜ್ಜನ ಮಾಡಿಕೊಂಡು, ವಿವಿಧ ರತ್ನಾಭರಣಗಳಿಂದ ಅಲಂಕೃತಳಾಗಿ, ಸುಗಂಧ ಲೇಪನದಿಂದಲೂ, ಕುಸುಮದ ಮೊಗ್ಗೆಯಿಂದ ರಚಿಸಿದ ಸಿರಿಮುಡಿಯಿಂದಲೂ ಅಲಂಕೃತಳಾದಮೇಲೆ ಹೇಳಬೇಕೆ? "ಜನಮನದ ಸಂಕಲವನೆ"ಯಂತೆ ಇದ್ದ ಊರ್ವಶಿ ಬಳ್ಳಿಮಿಂಚಿನ ಮುಂದೆಯಲ್ಲಿ ಬಂದಿಳಿದ ಚಂದ್ರನಂತೆ ಸಖಿಯರೊಡನೆ ಆಗಮಿಸಿದಳು. ಅರ್ಜುನನು ಸಾರ ಸುವಾಸನೆಯ ಸುಳಿಗಾಳಿ ಬೀಸಿದಂತಾಗಿ ಎಚ್ಚತ್ತನು. ಕಣ್ಣು ಬಿಟ್ಟು ನೋಡುತ್ತಾನೆ, ಆಭರಣಗಳ ಕಿರಣಲಹರಿಯ ಪಂಜರದಲ್ಲಿ ಹೊಳೆಹೊಳೆಯುತ್ತಿದ್ದ ಮದನಾಲಸೆಯಾದ ಊರ್ವಶಿ ಕಣ್ಣಿಗೆ ಬಿದ್ದಳು. ಆಕೆಯನ್ನು ಕಂಡು ಅವನ ಮನಸ್ಸಿನಲ್ಲಿ ಭಕ್ತಿ ಗೌರವಗಳು ಉದಯಿಸಿದವು. ತಂದೆಯಾದ ದೇವೇಂದ್ರನ ಅರಸಿಯಾದ ಆಕೆ ತನ್ನ ತಾಯಿಯ ಸಮಾನವೆಂದು ಭಾವಿಸಿ ಹಾಸಿಗೆಯಿಂದ ಧಿಗ್ಗನೆದ್ದು, ಮಂಚದಿಂದಿಳಿದು, ಆಕೆಗೆ ನಮಸ್ಕರಿಸಿದನು. "ಇಷ್ಟು ದೂರ ತಾವು ಬಿಜಯಗೈದುದೇಕೆ? ತಮ್ಮ ಅಪ್ಪಣೆಯೇನು? ನಾನು ನಿಮಗೆ ಮಗ, ಸಂಕೋಚವಿಲ್ಲದೆ ಹೇಳಿ" ಎಂದು ಬೇಡಿದನು. ಅರ್ಜುನನ ನುಡಿಗಳಿಂದ ಊರ್ವಶಿ ಬೆರಗಾದಳು. ಅವನ ನಡವಳಿಕೆ ಆಕೆಗೆ ಮೆಚ್ಚಿಗೆಯಾದರೂ ಅಂಗಜಾಸ್ತ್ರದಿಂದ ಬೆಚ್ಚಿದಳು. ಒಮ್ಮೆಯೇ ಬಗೆಬಗೆಯ ಭಾವಗಳು ಮನದಲ್ಲಿ ಎದ್ದು ಆಕೆಗೆ ಮುಂದೋರದಂತಾಯಿತು. ತನ್ನ ಲೋಕದ ನಡೆವಳಿಕೆಯನ್ನು ಅರಿಯದ ಈ ಅರ್ಜುನನನ್ನು ವಿಧಿ ಏಕಾದರೂ ನಿರ್ಮಿಸಿದನೋ ಎಂದು ಮಿಡುಕಿಕೊಂಡಳು. ತಾನು ಬಂದ ಕಾರ್ಯವನ್ನು ಸೂಕ್ಷ್ಮವಾಗಿ ವಿವರಿಸಿದಳು. ಕೇಳಿ ಅರ್ಜುನನು ಕಿವಿಗಳನ್ನು ಮುಚ್ಚಿಕೊಂಡನು. "ತಾಯಿ, ನನಗೆ ಅಕಾರ್ಯದಲ್ಲಿ ಮನಸ್ಸಾಗದು. ನಮ್ಮ ವಂಶಕ್ಕೆ ಮೂಲಪುರುಷ

ನಾದ ಪೂರೂರವನ ಕೈಹಿಡಿದ ಮಡದಿ ನೀನು. ನಿನ್ನ ಮಗನಾದ ಆಯು, ಅವನ ಮಗ ನಹುಷ—ಈ ವಂಶಪರಂಪರೆಯಲ್ಲಿ ನಾವು ಉದಿಸಿದ್ದೇವೆ" ಎಂದು ಹೇಳಿಕೊಂಡನು. ಆದರೆ ಅವನ ನುಡಿಜಾಣ್ಮೆ ಅವಳಲ್ಲಿ ನಡೆಯಲಿಲ್ಲ. ಅವಳ ತರ್ಕಸರಣಿ ವಿಲಕ್ಷಣವಾದುದು. "ನಿಮ್ಮ ತಂದೆ, ತಾತ, ಮುತ್ತಾತ, ಅವನ ಭಾವಮೈದುನ, ಅಣ್ಣ, ತಮ್ಮ, ಜ್ಞಾತಿ, ಬಾಂಧವ ಮೊದಲಾದ ಎಲ್ಲರಿಗೂ ನಾನೊಬ್ಬಳೇ ಹೆಂಡತಿ" ಎಂದು ನಗುತ್ತ ಉತ್ತರಕೊಟ್ಟಳು. "ನರಗುರಿಗಳ ನಿಯಮ ಕಟ್ಟಳೆಗಳು ಸ್ವರ್ಗದವರಿಗೆ ಸಣಬಿನಾರವೆ." ಇದೂ ಅಲ್ಲದೆ ಹೆಣ್ಣಿನ ಇಚ್ಛೆಯನ್ನು ಅರಿಯಲಾರದವನು, ಸುರೇಂದ್ರನಾಗಲಿ, ಚಂದ್ರನಾಗಲಿ ಅವನೊಬ್ಬ ಕುರಿ ಅವಳ ದೃಷ್ಟಿಯಲ್ಲಿ. ಕುರಿಯಾದ ನರನು ಹುಲಿಯಾದ ಊರ್ವಶಿಯ ಮನೋಹರನಾಗಲು ಒಪ್ಪಲಿಲ್ಲ. ಅವನ ಹಟ ವನ್ನು ಕಂಡು ಊರ್ವಶಿಯ ಕೋಪ ಕೆರಳಿತು. ಕಣ್ಣುಗಳು ಕೆಂಡವನ್ನು ಕಾರಿದವು, ತುಟಿ ನಡುಗಿತು, ಉಸಿರು ಬಿಸಿಯಾಯಿತು. ಭಯಂಕರ ಸರ್ಪದ ನೆತ್ತಿಯಲ್ಲಿರುವ ರತ್ನದಂತೆ ಅವಳ ರೂಪು ಸುಮನೋಹರ ಭಯಂ ಕರವಾಯಿತು. ಅವಳು ಅರ್ಜುನನನ್ನು ವಾಚಾಮಗೋಚರವಾಗಿ ಬೈ ಯ್ಯುತ್ತಾ ಭಾರತ ಭೂಮಿಯಲ್ಲಿ ಒಂದು ವರ್ಷಕಾಲ ನಪುಂಸಕನಾಗಿ ಬಿದ್ದಿರುವಂತೆ ಶಪಿಸಿದಳು.

ಊರ್ವಶಿಯ ವರ್ತನೆಯನ್ನು ಕಂಡು ಅರ್ಜುನನು ಮೂಕನಾದನು. ಸ್ವರ್ಗಲೋಕದ ಈ ಹೆಣ್ಣುಗಳ ನಾಗರಿಕತೆ ಮಾನವನಾದ ಅರ್ಜುನನಿಗೆ ಅರ್ಥವಾಗಲಿಲ್ಲ. ಧರ್ಮವೇ ತಪವೆಂದು ಆಚರಿಸಿದರೆ ಅದಕ್ಕೆ ದೊರೆತದ್ದು ಷಂಡತನವೇ! ಇದೆಲ್ಲಿಯ ಗ್ರಹಚಾರ? ಹೀಗೆಂದು ಅವನು ದುಗುಡದಿಂದ ಕುಳಿತಿರುವಾಗ, ಶಾಪವೃತ್ತಾಂತವನ್ನು ಕೇಳಿದ ದೇವೇಂದ್ರನು ಅವನ ಬಳಿಗೆ ಧಾವಿಸಿದನು. ಮಿಡುಕುತ್ತಿದ್ದ ಮಗನನ್ನು ತೆಗೆದಪ್ಪಿಕೊಂಡು, ಲಲ್ಲೈಸಿ, ತನಗಾಗಿ ಊರ್ವಶಿಯ ದೋಷವನ್ನು ಸೈರಿಸುವಂತೆ ಬೇಡಿಕೊಂಡನು. ಅವಳ ಶಾಪವೇ ಒಂದು ವರವೆಂಬುದನ್ನು ವಿವರಿಸಿ ಹೇಳಿದನು. ಮುಂದೆ ಅಜ್ಞಾತವಾಸದಲ್ಲಿ ಒಂದು ವರುಷವನ್ನು ಕಳೆಯಲು ಇದು ಸಾಧನವಾಗು ವುದೆಂದು ಹೇಳಿ ಅವನನ್ನು ಸಮಾಧಾನಪಡಿಸಿದನು.

ಅರ್ಜುನನು ದೇವೇಂದ್ರನ ಅತಿಥಿಯಾಗಿ ಹಲವು ದಿನ ಸ್ವರ್ಗದ

ಲ್ಲಿಯೇ ನಿಂತನು. ಇತ್ತ ಧರ್ಮರಾಯನಿಗೆ ದಿನದಿನಕ್ಕೂ ತಮ್ಮನ ಆತಂಕ ಹೆಚ್ಚಿತು. ಆತನು ಅರ್ಜುನನ ಬರವನ್ನೇ ಹಾರೈಸುತ್ತಾ ಇರುವಾಗ ಶಿಶಿರದ ವನಕ್ಕೆ ವಸಂತ ಬಂದಂತೆ ಅರ್ಜುನನು ಹಿಂತಿರುಗಿದನು. ಆತನು ಪಾಶುಪತಾಸ್ತ್ರವನ್ನು ಪಡೆದುದನ್ನೂ, ದೇವೇಂದ್ರನ ಆತಿಥ್ಯದ ವೈಖರಿಯನ್ನೂ ಬಣ್ಣಬಣ್ಣವಾಗಿ ವರ್ಣಿಸಿ ಹೇಳಿದನು. ಅವನ್ನು ಕೇಳಿ ಧರ್ಮರಾಯನಿಗೆ ಆದ ಸಂತೋಷಕ್ಕೆ ಪಾರವೇ ಇಲ್ಲ. ಇನ್ನು ತಮ್ಮ ಶತ್ರುಗಳ ಬಲವೆಲ್ಲ ಮುರಿದಂತೆಯೇ ಸರಿ ಎಂದು ಪಾಂಡವರು ಸಂತಸದಲ್ಲಿ ಮುಳುಗಿದರು.

ಅತ್ತ ಹಸ್ತಿನಾಪುರಿಯಲ್ಲಿ ಕುರುಡ ದೊರೆ ಪಾಂಡವರು ಅರಣ್ಯವಾಸವನ್ನು ಹೇಗೆ ಸವೆಸುತ್ತಿರುವರೋ ಎಂಬ ಚಿಂತೆಯಲ್ಲಿರಲು ಕಾಮ್ಯಕ ವನದಿಂದ ಅಲ್ಲಿಗೆ ಹೋಗಿದ್ದ ಬ್ರಾಹ್ಮಣನೊಬ್ಬನು ಪಾಂಡವರಿಗೆ ಆದ ತೊಂದರೆಗಳನ್ನೂ ಅವು ನಿವಾರಣೆಯಾದುದನ್ನೂ ತಿಳಿಸಿದನು. ಅದನ್ನು ಕೇಳಿ ಆ ಮುದುಕ ಮಿಡುಕುತಿದ್ದರೆ, ಕರ್ಣ ಶಕುನಿಗಳು ಕೈ ಹೊಯ್ದು ನಗುತ್ತಾ ನಲಿದಾಡಿದರು. ಅಷ್ಟೆ ಅಲ್ಲ, ತಮ್ಮ ವೈಭವ ವಿಲಾಸದೊಡನೆ ಪಾಂಡವರ ಮುಂದೆ ಮೆರೆಯಬೇಕೆಂದು ದುರ್ಯೋಧನನಿಗೆ ಸಲಹೆಯಿತ್ತರು. ಒಡನೆಯೇ ಅವರು ಕಾಮ್ಯಕವನಕ್ಕೆ ಘೋಷಯಾತ್ರೆಯನ್ನು ಕೈಕೊಳ್ಳುವುದೆಂದು ನಿಶ್ಚಯವಾಯಿತು. ಬೇಡವೆಂದು ಹೇಳಿದ ಹಿರಿಯರ ಮಾತುಗಳು ಬೂದಿಯಲ್ಲಿ ಮಾಡಿದ ಹೋಮವಾಯಿತು. ಮಹಾ ವೈಭವದಿಂದ ಕೌರವ ಪರಿವಾರ ಪಾಂಡವರಿದ್ದ ದ್ವೈತವನವನ್ನು ಸೇರಿತು.

ವಿನೋದ, ವಿಹಾರ, ವಿಲಾಸಗಳಿಗಾಗಿ ಹೊರಟಿದ್ದ ಕೌರವ ಪರಿವಾರ ವನವನ್ನೆಲ್ಲ ತಮ್ಮ ಭೋಗಭೂಮಿಯನ್ನಾಗಿ ಮಾಡಿಕೊಂಡಿತು. ಕೌರವನ ಅರಸಿಯರು ಅಸಂಖ್ಯಾತರಾದ ತಮ್ಮ ಸಖೀಜನರೊಡನೆ ವನವಿಹಾರವನ್ನು ಆರಂಭಿಸಿದರು. ಅವರ ಕಾಲ್ಗೆಜ್ಜೆಗಳ ದನಿಯಿಂದ ವನದಲ್ಲಿದ್ದ ಋಷಿಗಳ ವೇದಘೋಷ ಮುಚ್ಚಿಹೋಯಿತು. ಆ ಹೆಣ್ಣುಗಳು ಋಷಿಗಳ ಸ್ರುಕ್ ಸ್ರುವಗಳನ್ನು ಎಳೆದಾಡಿದರು. ಅವರ ವಲ್ಕಲಗಳಲ್ಲಿ ಇವರು ತಾಂಬೂಲವನ್ನು ಕಟ್ಟಿದರು. ತಪಸ್ಸು ಮಾಡುತ್ತಿದ್ದವರ ಮುಖದ ಮೇಲೆ ಬೆರಳಾಡಿಸಿದರು. ದೀಕ್ಷಿತರ ಜಂಡಿಕೆಗಳನ್ನು ಹಿಡಿದೆಳೆದರು. ಋಷಿವಟುಗಳ ಬೋಳುತಲೆಗಳಮೇಲೆ ಚಿಟಿಕೆ ಹಾಕಿದರು. ಈ ನಗರ ನಾಗರಿಕರ ಉಪ

ಟಳವನ್ನು ಸೈರಿಸಲಾರದೆ ಅವರು ಇವೆಲ್ಲವನ್ನೂ ಧರ್ಮರಾಯನಲ್ಲಿ ದೂರಿಕೊಂಡರು. ಆತನು ಹೆಣ್ಣುಗಳ ವಿನೋದವನ್ನು ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಳ್ಳಬಾರದೆಂದು ಸಮಾಧಾನ ಹೇಳಿದನು.

ಅಷ್ಟರಲ್ಲಿ ರಾಣಿವಾಸದ ಹೆಣ್ಣುಗಳು ನೀರಾಟಕ್ಕೆಂದು ಸರೋವರವನ್ನರಸುತ್ತ ಹೋಗುತ್ತಿರಲು ಮನೋಹರವಾದ ಉದ್ಯಾನವೊಂದು ಅವರ ಕಣ್ಣಿಗೆ ಬಿತ್ತು. ಸೇವಕಜನ ಉದ್ಯಾನವನದ ಮುಳ್ಳುಬೇಲಿಯನ್ನೆಲ್ಲಾ ಧ್ವಂಸ ಮಾಡಿದರು; ಅದರ ಬಾಗಿಲಿಗೆ ಹಾಕಿದ ಬೀಗವನ್ನು ಒಡೆದು ಹಾಕಿದರು; ಬಾಗಿಲನು ಕಿತ್ತುಹಾಕಿದರು. ಅದು ಗಂಧರ್ವರಾಜನಾದ ಚಿತ್ರಸೇನನ ಪ್ರೇಮದ ಉದ್ಯಾನ. ಕಾವಲುಗಾರರು ಇದನ್ನು ತಿಳಿಸಿ ವನವನ್ನು ಪ್ರವೇಶಿಸದಂತೆ ತಡೆದರು. ಇದರಿಂದ ಕೌರವನ ಪರಿವಾರಕ್ಕೂ, ಕಾವಲುಗಾರರಿಗೂ ಯುದ್ಧವುಂಟಾಯಿತು. ಕ್ಷಣಮಾತ್ರದಲ್ಲಿ ಈ ಯುದ್ಧ ಭಯಂಕರಾಕಾರವನ್ನು ತಳೆಯಿತು. ಸುದ್ದಿ ಸುರಪುರಿಯ ಚಿತ್ರಸೇನನಿಗೆ ಮುಟ್ಟಿತು. ಆತನು ಕಡುಗೋಪದಿಂದ ಕೆಳಗಿಳಿದು ಬಂದು ಕೌರವರನ್ನೆಲ್ಲಾ ಸದೆಬಡಿದನು. ಕಡೆಗೆ ದುರ್ಯೋಧನನನ್ನು ಹೆಡಮುರಿಗೆ ಬಿಗಿದು ಎಳೆದೊಯ್ದನು. ಕೌರವನನ್ನು ಕಟ್ಟಿ ಕೊಂಡೊಯ್ದುದನ್ನು ಕೇಳದ ಭಾನುಮತಿ ಮುಂಗಾಣದವಳಾಗಿ ಧರ್ಮರಾಯನ ಬಳಿಗೆ ಓಡಿಬಂದಳು. ಆತನ ಕಾಲಮೇಲೆ ಕೆಡೆದು ಬಿದ್ದು "ಹೇ, ಸತ್ಯಧರ್ಮದ ಸಂರಕ್ಷಕ, ನನ್ನನ್ನು ಕಾಪಾಡು. ಗಂಧರ್ವರ ಬಂಧನಕ್ಕೆ ಸಿಕ್ಕಿರುವ ನನ್ನ ಪತಿಯನ್ನು ಉಳಿಸಿ ನನ್ನ ಮಾಂಗಲ್ಯವನ್ನು ರಕ್ಷಿಸು. ನಮ್ಮ ಅಪರಾಧಗಳನ್ನು ಮನ್ನಿಸು" ಎಂದು ಬೇಡಿಕೊಂಡಳು. ಅವಳ ದುಸ್ಥಿತಿಯನ್ನು ಕಂಡು ಧರ್ಮರಾಯನ ಮನಸ್ಸು ಕರಗಿತು. ತನ್ನ ಕಣ್ಣಿನಲ್ಲಿಯೂ ನೀರು ಸುರಿಸುತ್ತಾ ಭಾನುಮತಿಯನ್ನು ಸಮಾಧಾನ ಪಡಿಸಿದನು. ಕೌರವನನ್ನು ಒಡನೆಯೇ ಬಿಡಿಸಿ ತರುವಂತೆ ಆತನು ಭೀಮನಿಗೆ ಅಪ್ಪಣೆಮಾಡಿದನು. ಆದರೆ ಭೀಮನ ಅಣ್ಣನ ಮಾತನ್ನು ಒಪ್ಪಲಿಲ್ಲ. "ಅವರ ದುಷ್ಕೃತ ಅವರಿಗೆ ಫಲಿಸಿತು. ನಾವು ಮಾಡುವ ಕೆಲಸವನ್ನು ಗಂಧರ್ವರು ಮಾಡಿದರು. ಇದರಿಂದ ನಿನಗೇನು ನಷ್ಟ?" ಎಂದು ಆ ಒರಟನು ಉತ್ತರವಿತ್ತನು. ಅವನಿಗೆ ಹೇಳಿ ಫಲವಿಲ್ಲವೆಂದು ಧರ್ಮರಾಯನು ಅರ್ಜುನನನ್ನು ಕರೆದು "ಅಯ್ಯಾ ನೀನು ಶಸ್ತ್ರ

ಗಳನ್ನು ಭಂಗಿಸಿ ಕೌರವನನ್ನು ಹಿಂದಕ್ಕೆ ಕರೆತರುವವರೆಗೂ ನಾನು ಊಟ ಮಾಡುವುದಿಲ್ಲ" ಎಂದು ಸತ್ಯಾಗ್ರಹ ಹೂಡಿದನು. ಅರ್ಜುನನು ಒಡನೆಯೇ ಬಿಲ್ಲುಬಾಣಗಳನ್ನು ಧರಿಸಿ ಗಗನಕ್ಕೆ ಚಿಗಿದನು. ನಿಲ್ಲುನಿಲ್ಲೆಂದು ಅಬ್ಬರಿಸುತ್ತಾ ಹಿಂದಟ್ಟಿ ಬರುತ್ತಿದ್ದ ಅರ್ಜುನನನ್ನು ಕಂಡು ಚಿತ್ರಸೇನನು ನಿಂತನು ಅವನ ಚರ್ಯೆಯನ್ನು ಕಂಡು ಗಂಧರ್ವನಿಗೆ ಆಶ್ಚರ್ಯವಾಯಿತು. "ಅಯ್ಯಾ ಅರ್ಜುನ, ನೀನು ಮರುಳೋ, ಮೂಢನೋ ? ಹುಲಿಯನ್ನು ಹೊಡೆದು ಹಾಕಿದರೆ ಪಶುಸಂಕುಲಕ್ಕೆ ಸಂಕಟವೇ ? ಕಾಗೆಗಳನ್ನು ಬಡಿದು ಹಾಕಿದರೆ ಕೋಗಿಲೆಗೆ ತಲೆನೋವೆ ? ಕೌರವ ಕುಲವನ್ನು ಕಟ್ಟಿಹಾಕಿದರೆ ನಿನಗಾದ ಹೊಟ್ಟೆನೋವೇನು ?" ಎಂದು ಅವನನ್ನು ಪ್ರಶ್ನಿಸಿದನು. ಅರ್ಜುನನದು ಒಂದೇ ಉತ್ತರ. ಧರ್ಮವೋ ಅಧರ್ಮವೋ, ನೀತಿಯೋ ಅನೀತಿಯೋ, ಧರ್ಮಪುತ್ರನು ಬೆಸಸಿದ್ದನ್ನು ಆಚರಿಸುವುದು ಅವನ ಧರ್ಮ. ಅವನೊಡನೆ ವಾದಿಸಿ ಫಲವಿಲ್ಲೆಂದು ಖೇಚರನು ಕೌರವನೊಡನೆ ಅವನನ್ನು ಹಿಂಬಾಲಿಸಿ ಧರ್ಮರಾಯನ ಬಳಿಗೆ ಬಂದನು. "ತೆಗೆದುಕೊಳ್ಳಿ ನಿಮ್ಮ ಈ ಮೂರ್ಖನಾದ ಸೋದರನನ್ನು. ನಾನು ಈಗಲೇ ಹೇಳಿದ್ದೇನೆ, ಈ ಪಾಪಿಯನ್ನು ಬಿಡಿಸಿದರೆ ಶೀಘ್ರದಲ್ಲಿಯೇ ನಿಮಗೆ ಅಪಘಾತ ಕಾದಿರುತ್ತದೆ" ಹೀಗೆಂದು ನುಡಿದು ಖಚರನು ದೇವಲೋಕಕ್ಕೆ ಹಿಂದಿರುಗಿದನು.

ಗಂಧರ್ವರ ಕಗ್ಗಟ್ಟನ್ನು ಬಿಚ್ಚುವುದು ಪತಿವ್ರತಾಶಿರೋಮಣಿಗೆ ಮಾತ್ರ ಸಾಧ್ಯ. ಆದ್ದರಿಂದ ಕೌರವನ ಬಂಧನವನ್ನು ಬಿಡಿಸುವ ಕೆಲಸ ದ್ರೌಪದಿಯ ಪಾಲಿಗೆ ಬಂತು. ಆಕೆ ಅವನ ಕಟ್ಟನ್ನು ಬಿಡಿಸಿ "ರಾಜರೇ ತುಂಬಾ ಘಾಸಿಯಾಯಿತೇನೊ. ನಿಮ್ಮ ಮೈಯನ್ನು ಒತ್ತುವುದಕ್ಕೆ ಇಲ್ಲಿ ಯಾವ ಜಟ್ಟಿಗಳೂ ಇಲ್ಲ. ಅಯ್ಯೋ ಪಾಪ" ಎಂದು ಮುಗುಳ್ನಗುತ್ತಾ ನುಡಿದಳು. ಮಾನಧನನಾದ ಕೌರವನು ಜೀವವಿದ್ದರೂ ಸತ್ತವನಂತೆ ನಾಚಿಕೆಗೊಂಡು, ಅಲ್ಲಿಂದ ಹಿಂದಿರುಗಿದನು. ಹೋಗುವಾಗ ಇದ್ದ ಸಂಭ್ರಮವೆಲ್ಲವೂ ಅಡಗಿಹೋಗಿ ಜನ ಸಪ್ಪೆಮುಖದಿಂದ ಹಿಂತಿರುಗಿದರು. ಕೌರವನು ಪಾಳೆಯವನ್ನೆಲ್ಲಾ ಪುರದೊಳಗೆ ಹೊಗಿಸಿ, ತಾನು ಊರ ಹೊರಗೆ ನಿರ್ವೇಗಪರನಾಗಿ ಕುಳಿತನು. ಪ್ರಾಯೋಪವೇಶದಿಂದ ಪ್ರಾಣತ್ಯಾಗಮಾಡಲು ನಿಶ್ಚಯಿಸಿದ್ದ ಆತನ ಬಳಿಗೆ ಕರ್ಣ ಶಕುನಿಗಳು ಕೂಡ ಹೋಗುವಂತಿರಲಿಲ್ಲ.

ತನ್ನ ಬಳಿಗೆ ಒಬ್ಬರೂ ಬರದಂತೆ ಆತನ ಕಟ್ಟಾಜ್ಞೆಯಿತ್ತು. ಆಳುಗಳನ್ನು ನೇಮಿಸಿದನು. ಆಗ ಭಾನುಮತಿಯು ಅಲ್ಲಿಗೆ ಬಂದು, ತಡೆದವನನ್ನು ಕಾಲಿ ಸಿಂದೊದೆದು ಗಂಡನ ಬಳಿಗೆ ಹೋದಳು. ಆಕೆ ಹೇಳಿದ ವಿವೇಕಬೋಧೆ ಯೆಲ್ಲವೂ ಮರಳುಗಾಡಿನಲ್ಲಿ ಉದುರುವ ತುಂತುರು ಹನಿಯಾಯಿತು. ತಾಯಿ, ತಂದೆ, ಭೀಷ್ಮ, ದ್ರೋಣ ಇವರುಗಳೆಲ್ಲರೂ ಮಾಡಿದ ಬೋಧನೆ ನಿರರ್ಥಕವಾಯಿತು. " ಈ ಶರೀರವ ನೂಕಿ ನಿಲುವೆನು ಮುಕ್ತಿರಾಜ್ಯದಲಿ " ಎಂದು ಅವನು ಹಟಹಿಡಿದನು.

ಕೌರವನು ಹಿಡಿದ ಹಟವನ್ನು ಬಿಡದೆ ನದೀತೀರದಲ್ಲಿಯೇ ಸಮಾಧಿ ಸ್ಥನಾಗಿ ಕುಳಿತಿದ್ದನು. ಹೀಗಿರಲು ಆ ರಾತ್ರಿ ರಾಕ್ಷಸ ಸೇನೆ ಬಂದು ಅವ ನನ್ನು ರಸಾತಳಕ್ಕೆ ಕರೆದುಕೊಂಡು ಹೋಯಿತು. " ನಾವಿರುವಾಗ ನಿನ ಗೇಕೆ ಈ ಚಿಂತೆ? ನೀನು ಸಾಯಬೇಡ. ನಿನಗಾಗಿ ನಾವು ನಮ್ಮ ಪ್ರಾಣ ಗಳನ್ನು ಮೀಸಲಾಗಿಡುತ್ತೇವೆ. ಪಾಂಡವರನ್ನು ಧ್ವಂಸಮಾಡುವ ಕಾರ್ಯ ನಮಗಿರಲಿ " ಎಂದು ಬೋಧಿಸಿದರು. ಇದರಿಂದ ಸಮಾಧಾನಗೊಂಡ ಕೌರ ವನು ಮರುದಿನ ಅರಮನೆಗೆ ಹಿಂದಿರುಗಿದನು.

ಇತ್ತ ಪಾಂಡವರ ವನವಾಸದ ಅವಧಿ ಇನ್ನು ಆರು ತಿಂಗಳು ಮಾತ್ರ ಉಳಿದಿತ್ತು. ಒಂದು ದಿನ ದ್ವೈತವನದಲ್ಲಿ ಒಂದು ಚೋದ್ಯ ನಡೆಯಿತು. ಒಂದು ಜಿಂಕೆಯು ವಾನಪ್ರಸ್ಥಜನದ ಆಶ್ರಮದಿಂದ ಒಂದು ಔಪಾಸನದ ಅರ ಣಿಯನ್ನು ಹೊತ್ತುಕೊಂಡು ಹೋಯಿತು. ಇದನ್ನು ಕಂಡ ಋಷಿಪತ್ನಿಯು ಕೆಟ್ಟೆಕೆಟ್ಟೆನೆಂದು ಕೂಗುತ್ತಾ ಧರ್ಮರಾಯನಲ್ಲಿ ಮರೆಹೊಕ್ಕಳು. ಒಡ ನೆಯೇ ಆತನು ತಮ್ಮಂದಿರೊಡನೆ ಜಿಂಕೆಯನ್ನು ಹುಡುಕಿಕೊಂಡು ಹೊರ ಟನು. ಅರಣಿಯೇನೊ ಹಿಂದಕ್ಕೆ ಸಿಕ್ಕಿತು. ಆದರೆ ಧರ್ಮರಾಯನಿಗೆ ಬಳ ಲಿಕೆಯಿಂದ ನೀರಡಿಕೆಯಾಯಿತು. ಎಲ್ಲಿಯಾದರೂ ಸ್ವಲ್ಪ ನೀರನ್ನು ಹುಡುಕಿ ತರುವಂತೆ ನಕುಲನನ್ನು ಅಟ್ಟಿದನು. ಅಣ್ಣನ ಅಪ್ಪಣೆಯಂತೆ ಅವನು ನೀರನ್ನು ಅರಸುತ್ತಾ ಹೋದನು. ಬಹು ದೂರ ನಡೆದಮೇಲೆ ಸುಂದರ ವಾದ ಸರೋವರವೊಂದು ಕಣ್ಣಿಗೆ ಬಿತ್ತು. ನಕುಲನು ಅದರೊಳಕ್ಕೆ ಇಳಿದು ಮುಖ ಕಾಲುಗಳನ್ನು ತೊಳೆದುಕೊಂಡು ತನ್ನ ಬಾಯಾರಿಕೆಯನ್ನು ಪರಿಹ ರಿಸಿಕೊಳ್ಳುವುದಕ್ಕಾಗಿ ಬೊಗಸೆಯಲ್ಲಿ ನೀರೆತ್ತಿದನು. ಒಡನೆಯೇ ಆಕಾಶ

ದಿಂದ ಮಾತು ಕೇಳಿಬಂತು—"ಎಲೈ ನಕುಲನೆ, ನನ್ನ ಮಾತಿಗೆ ಉತ್ತರ ಕೊಟ್ಟು ಅನಂತರ ನೀರು ಕುಡಿ" ಎಂದು. ಆದರೆ ನಕುಲನ ಬಾಯಾರಿಕೆ ತಡೆಯಲಾರದ್ದಾಗಿತ್ತು. ಅವನು ಆಕಾಶ ಭಾಷಣವನ್ನು ನಿರ್ಲಕ್ಷಿಸಿ ನೀರು ಕುಡಿದನು. ಮರುಕ್ಷಣದಲ್ಲಿಯೇ ಅಣ್ಣನಿಗೆಂದು ಕಮಲದ ಎಲೆಯಲ್ಲಿ ನೀರನ್ನು ತುಂಬಿಕೊಂಡು ತಡಿಯೇರಿದನು. ಆದರೆ ಅಷ್ಟರಲ್ಲಿ ಅವನು ಸತ್ತು ಕೆಳಗುರುಳಿದನು.

ಎಷ್ಟು ಹೊತ್ತಾದರೂ ನಕುಲನು ಹಿಂದಿರುಗಲಿಲ್ಲ. ಧರ್ಮರಾಜನ ಬಾಯಾರಿಕೆ ತಡೆಯಲಸಾಧ್ಯವಾಯಿತು. ಆದ್ದರಿಂದ ಕೂಡಲೆ ನೀರು ತರಲು ಸಹದೇವನನ್ನು ಅಟ್ಟಿದನು. ಅವನು ನಕುಲನು ಸತ್ತುಬಿದ್ದಿದ್ದ ಕೊಳದೆಡೆಗೇ ಬಂದನು. ಅಲ್ಲಿ ಉಸಿರು ನಿಂತ ತಮ್ಮನನ್ನು ಕಂಡರೂ, ಜೀವವನ್ನು ಹಿಂಡುತ್ತಿದ್ದ ಬಾಯಾರಿಕೆಯನ್ನು ಮೊದಲು ನೀಗಬೇಕೆಂದು ಅವನ ಮನಸ್ಸು. ಈಗಲೂ ಆಕಾಶದ ದನಿ ಅವನನ್ನು ತಡೆಯಿತು. ಆದರೇನು? ಸಹದೇವನು ನಕುಲನಂತೆಯೇ ನೀರು ಕುಡಿದು ತಡಿಗೇರುವಷ್ಟರಲ್ಲಿ ಮೈ ಮರೆತು ಮಡಿದುರುಳಿದನು. ಹಿಂದೆಯೇ ಅರ್ಜುನ ಭೀಮಸೇನರ ಸರದಿಯೂ ಬಂತು. ತಮ್ಮಂದಿರಂತೆ ಅವರೂ ಕ್ರಮವಾಗಿ ಆಕಾಶವಾಣಿಯನ್ನು ನಿರ್ಲಕ್ಷಿಸಿ ನೀರು ಕುಡಿದು ಗತಪ್ರಾಣರಾದರು. ಕಡೆಗೆ ಧರ್ಮರಾಯನೂ ಬಂದೇ ಬರಬೇಕಾಯಿತು.

ಕೊಳದ ತಡಿಯಲ್ಲಿ ಅಸುನೀಗಿ ಮಲಗಿದ್ದ ನಾಲ್ವರು ತಮ್ಮಂದಿರನ್ನು ಕಂಡು ಧರ್ಮರಾಯನ ಮನಸ್ಸು ಮರಮರ ಮರುಗಿತು. ಯಾವ ಗಾಯದ ಗುರುತೂ ಇಲ್ಲದೆ ಬಿದ್ದಿದ್ದ ತಮ್ಮಂದಿರ ಶವಗಳನ್ನು ಕಂಡು ಕುತೂಹಲವೂ ಹುಟ್ಟಿತು. ಆದರೆ ಮೊದಲು ನೀರುಕುಡಿದು ಅನಂತರ ಇದರ ಮೂಲವನ್ನು ಬೆದಕಬೇಕೆಂದು ಆತನು ನಿಶ್ಚಯಿಸಿದನು. ಆತನು ಬೊಗಸೆಯಲ್ಲಿ ನೀರನ್ನು ತುಂಬಿಕೊಂಡು ತುಟಿಗಳ ಬಳಿಗೆ ಒಯ್ಯುತ್ತಿದ್ದಂತೆಯೇ ಮುಗಿಲದನಿ ಕೇಳಿಸಿತು—"ಅಯ್ಯಾ, ಧರ್ಮರಾಯ, ನಿನ್ನ ತಮ್ಮಂದಿರು ಅವಿವೇಕಿಗಳು; ನನ್ನ ಪ್ರಶ್ನೆಗಳಿಗೆ ಉತ್ತರವೀಯದೆ ನೀರು ಕುಡಿದು ಸತ್ತುಬಿದ್ದರು. ವಿವೇಕಿಯಾದ ನೀನು ಹಾಗೆ ಮಾಡಬೇಡ. ಮೊದಲು ನನ್ನ ಪ್ರಶ್ನೆಗಳಿಗೆ ಉತ್ತರ ಕೊಡು." ಧರ್ಮರಾಯನು ನೀರಡಿಕೆಯಿಂದ ಜೀವ ತತ್ತರಿಸುತ್ತಿದ್ದರೂ

ಅದನ್ನು ಲಕ್ಷಿಸದೆ ಬೊಗಸೆಯಲ್ಲಿದ್ದ ನೀರನ್ನು ಕೆಳಗೆ ಚೆಲ್ಲಿದನು. ಆಕಾಶ ವಾಣಿಯನ್ನು ಕುರಿತು ಅಯ್ಯಾ ನೀನಾರು? ಆಕಾಶದಲ್ಲಿ ಏಕೆ ಇದ್ದೀಯೆ?" ಎಂದು ಕೇಳಿದನು. ಆಗ ಆ ದನಿಯು ತಾನು ಯಕ್ಷನೆಂದು ತಿಳಿಸಿ, ಧರ್ಮ ರಾಯನೊಡನೆ ಧರ್ಮಜಿಜ್ಞಾಸೆ ನಡೆಸಿದನು. ತನ್ನ ಸಂದೇಹಗಳಿಗೆ ಕೊಟ್ಟ ಉತ್ತರಗಳಿಂದ ಯಕ್ಷನು ಸುಪ್ರೀತನಾದನು; ಆತನ ತಮ್ಮಂದಿರನ್ನೆಲ್ಲಾ ಬದುಕಿಸಿಕೊಟ್ಟನು. ಶ್ರೀ ಕೃಷ್ಣನ ಆಜ್ಞಾನುಸಾರ ತಾನು ಆ ಕೆಲಸವನ್ನು ಕೈಕೊಂಡುದಾಗಿ ನಿವೇದಿಸಿದನು. ದುರ್ಯೋಧನನು ಪಾಂಡವ ನಾಶಕ್ಕಾಗಿ ಯಜ್ಞವೊಂದನ್ನು ನಡೆಸಿ ಭಯಂಕರವಾದ ಭೂತವನ್ನು ಸೃಷ್ಟಿಸಿದುದಾ ಗಿಯೂ ಶ್ರೀ ಕೃಷ್ಣನು ಪಾಂಡವರ ತಲೆಗಾಯಲು ಈ ಉಪಾಯವನ್ನು ಸೂಚಿಸಿದುದಾಗಿಯೂ ವಿವರಿಸಿದನು. ಅಂದಿಗೆ ವನವಾಸದ ಅವಧಿ ಮುಗಿ ಯಿತೆಂದು ತಿಳಿಸಿ ಆತನು ಪಾಂಡವರನ್ನು ಅಜ್ಞಾತವಾಸಕ್ಕೆ ಹರಸಿ ಕಳಿ ಸಿದನು.



# ಕನ್ನಡ ಮಹಾಭಾರತ

## ಅರಣ್ಯಪರ್ವ ಸಂಗ್ರಹ

### ೧. ಮಂಗಳಾಚರಣೆ

ಶ್ರೀವನಿತೆಯರಸನೆ ವಿಮಲ ರಾ
ಜೀವಪೀಠನ ಜನಕ ಜಗಕತಿ
ಪಾವನನೆ ಸನಕಾದಿ ಸಜ್ಜನ ನಿಕರ ದಾತಾರ
ರಾವಣಾಸುರ ಮಥನ ಶ್ರವಣಸು
ಧಾ ವಿನೂತನಕಥನ ಕಾರಣ
ಕಾವುದಾನತ ಜನವ ಗದುಗಿನ ವೀರನಾರಯಣ || ೧

ವೀರನಾರಾಯಣನೆ ಕವಿ ಲಿಪಿ
ಕಾರ ಕುವರವ್ಯಾಸ ಕೇಳುವ
ಸೂರಿಗಳು ಸನಕಾದಿಗಳು ಜಂಗಮ ಜನಾರ್ದನರು
ಚಾರುಕವಿತೆಯ ಬಳಕೆಯಲ್ಲ ವಿ
ಚಾರಿಸುವಡಳವಲ್ಲ ಚಿತ್ತವ
ಧಾರು ಹೋ ಸರ್ವಜ್ಞರಾದರು ಸಲುಗೆ ಬಿನ್ನಪವ || ೨

ತಿಣಿಕಿದನು ಫಣಿರಾಯ ರಾಮಾ
ಯಣದ ಕವಿಗಳ ಭಾರದಲಿ ತಿಂ
ಥಿಣಿಯ ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ
ಬಣಗು ಕವಿಗಳ ಲೆಕ್ಕಿಪನೆ ಸಾ
ಕೆಣಿಸದಿರು ಶುಕರೂಪನಲ್ಲನೆ
ಕುಣಿಸಿ ನಗನೇ ಕವಿ ಕುಮಾರವ್ಯಾಸನುಳಿದವರ || ೩

ಅರಸುಗಳಿಗಿದು ವೀರ ದ್ವಿಜರಿಗೆ
ಪರಮವೇದದ ಸಾರ ಯೋಗೀ
ಶ್ವರರ ತತ್ತ್ವವಿಚಾರ ಮಂತ್ರೀಜನಕೆ ಬುದ್ಧಿಗುಣ
ವಿರಹಿಗಳ ಶೃಂಗಾರ ವಿದ್ಯಾ
ಪರಿಣತರಲಂಕಾರ ಕಾವ್ಯಕೆ
ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ || ೪

ಹಲಗೆ ಬಳಪವ ಪಿಡಿಯದೊಂದ
ಗ್ಗಳಿಕೆ ಪದವಿಟ್ಟಳುಪದೊಂದ
ಗ್ಗಳಿಕೆ ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ
ಬಳಸಿ ಬರೆಯಲು ಕಂಠಪತ್ರದೊ
ಳುಲುಹುಗೆಡದಗ್ಗಳಿಕೆಯೆಂಬೀ
ಬಲುಹು ಗದುಗಿನ ವೀರನಾರಾಯಣನ ಕಿಂಕರಗೆ || ೫

ವೇದ ಪಾರಾಯಣದ ಫಲ ಗಂ
ಗಾದಿ ತೀರ್ಥಸ್ನಾನಫಲ ಕೃ
ಚ್ಛ್ರಾದಿ ತಪಸಿನ ಫಲವು ಜ್ಯೋತಿಷ್ಟೋಮಯಾಗಫಲ
ಮೇದಿನಿಯನೊಲಿದಿತ್ತ ಫಲ ವ
ಸ್ತ್ರಾದಿ ಕನ್ಯಾದಾನಫಲವಹು
ದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ || ೬

## ೨. ಕೆಡಹಿದನು ಕಿಮ್ಮೀರದಾನವನ

ಕೇಳು ಜನಮೇಜಯ ಧರಿತ್ರೀ
ಪಾಲ ಗಂಗಾತೀರದಲಿ ಭೂ
ಪಾಲಕರು ಗುರುಭೀಷ್ಮವಿದುರಾದ್ಯಖಿಳ ಬಾಂಧವರ
ಬೀಳುಕೊಂಡರು ಗಜಪುರದ ಜನ
ಜಾಲವನು ಕಳುಹಿದರು ಗಂಗಾ
ತೀರದುತ್ತರಭಾಗದಲಿ ಮಾಡಿದರು ವಿಶ್ರಮವ || ೧

ನಿಲಿಸೆ ನಿಲ್ಲದೆ ಬಂದರರಸನ
ಬಳಿಯಲಗ್ಗದ ಮಂಡಲೇಶ್ವರ
ರೊಲಿದು ಸಾಕಿದ ರಾಜಪುತ್ರರು ಹಲವು ಮನ್ನಣೆಯ
ಬಲುಭಟರು ಬಾಹತ್ತರದ ನಿ
ಶ್ಚಳನಿಯೋಗಿಗಳಾಶ್ರಮಿಗಳ
ಗ್ಗಳಿಯ ವಿಪ್ರಸ್ತೋಮ ಬಂದುದು ಕೋಟಿಸಂಖ್ಯೆಯಲಿ || ೨

ತುಂಬಿದನು ಕಂಬನಿಯನಕಟ ವಿ
ಡಂಬಿಸಿತೆ ವಿಧಿ ತನ್ನನಿನಿಬರ
ನಂಬಿಸಿದ ಪರಿಯೆಂತು ವಸನ ಗ್ರಾಸ ವಾಸದಲಿ
ತುಂಬಿ ಸಿರಿಗೆಡಿಸಿದಳ ಲಕ್ಷ್ಮಿಯ
ಮುಂಬಿಗನೊಳಪದೆಸೆಯ ಕುಂತದ
ಚುಂಬಕನೊಳೇನುಂಟು ಫಲವೆಂದರಸ ಬಿಸುಸುಯ್ದ || ೩

ಖೇದ ಬೇಡೆಲೆ ನೃಪತಿ ಹರುಷ ವಿ
ಷಾದದಲಿ ಸುಖ ದುಃಖದಲಿ ನುತಿ
ವಾದ ಪರಿವಾದದಲಿ ಸಮಬುದ್ಧಿಗಳಲಾ ಬುಧರು
ಈ ದುರಂತದ ಚಿಂತೆ ಬೇಡಾ
ದ್ವಾದಶಾತ್ಮನ ಭಜಿಸಿದರೆ ಭ
ಕ್ಷ್ಯಾದಿ ಬಹುವಿಧದನ್ನ ಸಿದ್ಧಿಪುದೆಂದನಾ ಧೌಮ್ಯ || ೪

ಧರಣಿಪತಿ ಕೇಳ್ ಧೌಮ್ಯವಚನಾಂ
ತರದೊಳಮರನದೀವಿಗಾಹನ
ಪರಮಪಾವನಕರಣನೀಕ್ಷಿಸಿ ತರಣಿಮಂಡಲವ
ಮುರುಹಿ ಮೂಲಾಧಾರಪವನನ
ನುರುಸುಷುಮ್ನೆಗೆ ನೆಗಹಿ ನಿಶ್ಚಲ
ಕರಸಮಾಧಿಯೊಳಿನನ ಮೆಚ್ಚಿಸಿದನು ಮಹೀಪಾಲ || ೫೯

ವರವ ಕೊಟ್ಟಿನು ನಿನಗೆ ಹೇಮದ
ಚರುಕವಿದೆ ವಿವಿಧಾನ್ನಪಾನೋ
ತ್ಕರದ ತವನಿಧಿ ನಿನ್ನ ವಧು ಬಾಣಸದ ಕರಣದಲಿ
ವಿರಚಿಸಲಿ ಬಳಿಕುಣಲಿ ಶತಸಾ
ವಿರವನಂತವು ನೀವು ಬಳಿಕಂ
ಬುರುಹಮುಖಿ ಮಱುದಿವಸವೀಪರಿಯೆಂದನಾ ದ್ಯುಮಣಿ || ೬೦

ಭೂಮಿಪತಿ ಭುಲ್ಲವಿಸಿದನು ನಿ
ಸ್ಸೀಮ ಸಂತೋಷದಲಿ ಸುಜನ
ಸ್ತೋಮ ರಕ್ಷಣಕಾದ ನಿರ್ವಾಹದ ನಿರೂಢಿಯಲಿ
ಆ ಮುನೀಂದ್ರಂಗೆಱಗಿದನು ನಿಜ
ಕಾಮಿನಿಯು ಕರೆದೀ ಹದನ ಸು
ಪ್ರೇಮದಿಂದಱುಹಿದನು ಭೀಮ ದನಂಜಯಾದ್ಯರಿಗೆ || ೬೧

ಇವರು ತಿರುಗಿದರಿತ್ತಲಡವಿಯ
ಭವಣಿಗೆಯ ಭಾರಾಂಕ ಭಾಷೆಯ
ಲವಿರಳಿತ ಜನಜಾಲಸಹಿತಾರಣ್ಯವಾಸದಲಿ
ಅವನಿಪತಿ ಕೇಳಿತ್ತಲಾ ಕೌ
ರವನ ನಗರಿಗೆ ಪಾರಿಕಾಂಕ್ಷಿ
ಪ್ರವರನೊಬ್ಬನು ಬಂದು ಕಂಡನು ಕೌರವೇಶ್ವರನ || ೬೨

ಮುನಿಯ ಸತ್ಕರಿಸಿದನು ಕೌರವ
ಜನಪನಾ ಋಷಿಮುಖ್ಯನೀತನ
ವಿನಯರಚನೆಗೆ ಮೆಚ್ಚಿ ನುಡಿದನು ರಾಜಕಾರಿಯವ

ಸಿನಗೆ ಕೊಱತೆಯದೊಂದು ಪಾಂಡವ
ಜನಪರನು ಜೂಜಿನಲಿ ಸೋಲಿಸಿ
ಕನಲಿಸಿದೆ ನೀ ಕೆಡುವೆಯೆಂದನು ಕೌರವೇಶ್ವರನ ‖ ೯

ಹೋದ ಕೃತಿಯಂತಿರಲಿ ಸಾಕಿ
ನ್ನಾದಡೆಯು ಕಾಂತೇಯರನು ನೀ
ನಾದರಿಸು ಕೊಡು ಧರೆಯನೆನೆ ಕೊಪ್ಪರಿಸಿ ಖಾತಿಯಲಿ
ಹೊಯ್ದು ತೊಡೆಯನು ಹಗೆಗೆ ಕೊಡುವೆನೆ
ಮೇದಿನಿಯನೆನೆ ರೋಷಶಿಖಿಯಲಿ
ಕಾದುದಾತನ ಹೃದಯ ಶಪಿಸಿದನಂದು ಮೈತ್ರೇಯ ‖ ೧೦

ತೊಡೆಗಳನು ಕಲಿಭೀಮ ಬವರದೊ
ಳುಡಿದು ಬಿಸುಡಲಿಯೆಂದು ಖತಿಯಲಿ
ನುಡಿಯೆ ಮುನಿಪನಸಂತವಿಟ್ಟನು ಬಂದು ಧೃತರಾಷ್ಟ್ರ
ತೊಡೆಗೆ ಬಂದುದೆ ತೋಟಿ ಸಾಕಿ
ನ್ನೊಡಬಡಿಕೆ ಫಲವಿಲ್ಲ ನಮ್ಮಯ
ನುಡಿಗೆ ಮಱುಮಾತಿಲ್ಲೆನುತ ಮುನಿ ಸರಿದನಾಶ್ರಮಕೆ ‖ ೧೧

ಅರಸ ಕೇಳ್ ಗಂಗಾನದಿಯನು
ತ್ತರಿಸಿದವರಿಗೆ ಕಮಲ ಮಿತ್ರನ
ಕರುಣವಾಯಿತು ಕನಕಪಾತ್ರೆಯೊಳಕ್ಷಯಾನ್ನದಲಿ
ಪರಿಕರದ ಪರುಠವಣೆಯಲಿ ಸಾ
ವಿರದ ಶತಸಂಖ್ಯಾತ ಧರಣೀ
ಸುರನಿಯೋಗಿಗಳಾಪ್ತಜನಸಹಿತೈದಿದರು ವನವ ‖ ೧೨

ಅರಸ ಕೇಳಂದೇಕಚಕ್ರದೊ
ಳೊರಸಿದನಲಾ ಭೀಮನಾತಗೆ
ಹಿರಿಯನೀ ಕಿಮ್ಮೀರ ಬಾಂಧವನಾ ಹಿಡಂಬಕಗೆ
ಧರಣಿಪಾಲನ ಸಪರಿವಾರದ
ಭರನ ಕಂಡನು ತನ್ನ ತಮ್ಮನ
ಹರಿಬವನು ಮರಳಿಚುವೆನೆಂದನುವಾದನವ್ಮರಾರಿ ‖ ೧೩

ಇವರು ಮೂಱನೇ ದಿನಕೆ ಕಾಮ್ಯಕ
ನವಮಹಾಬನಕಾಗಿ ಬರೆ ದಾ
ನವನು ದಾರಿಯನಡ್ಡಕಟ್ಟಿದ ಕೈಯ್ಯ ಮುಷ್ಟಿಯಲಿ
ಅವನ ಕಂಗಳ ಕೆಂಪಿನಲಿ ಮೇ
ಣವನ ದಾಡೆಯ ಮಿಂಚಿನಲಿ ಖಳ
ನವಯುವವ ಕಂಡಂಜಿ ನಿಂದುದು ಮುಂಗುಡಿಯ ಭಟರು ॥ ೧೪

ಅಡಿಗಡಿಗೆ ಮಾನಿಸರ ಸೊಗಡವ
ಗಡಿಸುತಿದೆ ಬರಹೇಳು ನೆತ್ತರು
ಗುಡಿಹಿಗ್ಗೈನೆಯರೆಲ್ಲಿ ಶಾಕಿನಿ ಡಾಕಿನಿಯರೆನುತ
ತಡೆಯಬೇಡಾ ತಿನ್ನೆನುತ ಬೊ
ಬ್ಬಿಡುತ ಖಳ ತಱುಬಿದನು ರಾಯನ
ಮಡದಿ ಹೊಕ್ಕಳು ಮಱೆಯಲರ್ಜುನ ಭೀಮ ಧರ್ಮಜರ ॥ ೧೫

ಆರು ನೀವ್ ನಡುವಿರುಳು ಪಾಂಡುಕು
ಮಾರಕರು ನೀವಿತ್ತಲೇನು ವಿ
ಚಾರಿಸಲು ನೀನಾರು ನೀವಾ ಬಕ ಹಿಡಿಂಬಕನ
ವೈರಿಗಳಲಾ ಹೊಲ್ಲೆಹೇನು ವಿ
ಕಾರಿಗಳನೊಡೆಹೊಯಿದು ಶೋಣಿತ
ವಾರಿಯೋಕುಳಿಯಾಡಬೇಹುದೆನುತ್ತ ಖಳ ಜಱೆದ ॥ ೧೬

ಮಿಡಿದನರ್ಜುನ ಧನುವನಾತನ
ತಡೆದು ನಿಂದನು ಭೀಮನಸುರನ
ಕೆಡಹಿ ಕಾಮ್ಯಕವನದ ಭೂರಿಯ ಭೂತಸಂತತಿಗೆ
ಬಡಿಸುವೆನು ನೀ ಸೈರಿಸೆನುತವ
ಗಡಿಸಿದನು ಕಲಿ ಭೀಮನಂತ್ಯದ
ಸಿಡಿಲ ಸೆಱೆ ಬಿಟ್ಟಂತೆ ಬೊಬ್ಬಿಱಿದೆದ್ದನಮರಾರಿ ॥ ೧೭

ಮುಱುಕಿಸುವ ಪವನಜನ ನೆತ್ತಿಯ
ನೆಱಗಿದನು ಬಳಿಕವನ ಹೊಯಿಲಿನ
ಬಿಱುಸಿನೈಯ್ಯನೊ ಸಿಡಿಲ ಶಿಷ್ಯನೊ ವಜ್ರಕರಹತಿಯೋ

ಕಱಿಗಿದನು ಮಯಣಾದಿಮೃಗಳಿಂ
ದೆಱೆದ ಕಾಹಿನ ಕಱುವೆನಲು ಕು
ಕ್ಕುಱಿಸಲಸುರನನಿಕ್ಕಿದನು ಚಾಪಳ ಚಪೇಟದಲಿ ॥ ೧೮

ಡೆಂಢಣಿಸಿ ಸುರವೈರಿ ಧೊಪ್ಪನೆ
ದಿಂಡುಗೆಡೆದನು ನೀಲಶೈಲದ
ದಂಡಿಕಾಱನ ದೇಹಗರ್ತದ ರಕ್ತನಿರ್ಝರದ
ದೊಂಡೆಗರುಳಿನ ಬಾಯಿ ಜೋಲಿನ
ಕುಂಡಳಿತಕರ ಜಂಘೆಗಳ ಬಿಡು
ಮಂಡೆಗೆದಱಿದ ಖಳನ ಕಂಡುದು ಭೂಸುರವ್ರಾತ ॥ ೧೯

ತಳಿತು ಬಿಟ್ಟುದು ಕೂಡೆ ಹರಹಿನ
ಹಳುವದಲಿ ದ್ವಿಜವರ್ಗ ರಚಿಸಿದ
ತಳಿರ ಗುಡಿಗಳ ಪರ್ಣಶಾಲೆಯು ಭದ್ರಭವನಿಕೆಯು
ಮೆಳೆಯು ಮಂಟಪ ಹೊದಱು ಹೊದಱಿನ
ನೆಳಲ ಚೌಕಿಗೆ ವಿಪುಳವಟಸಂ
ಕುಳದಲೋಲಗಶಾಲೆ ಮೆಱೆದುದು ಧರ್ಮನಂದನನ ॥ ೨೦

ಆ ಸಕಲ ಸಾಮ್ರಾಜ್ಯಲಕ್ಷ್ಮೀವಿ
ಳಾಸದರಮನೆಗಳನು ಮಱಸಿದು
ದೀ ಶರಭ ಶಾರ್ದೂಲಸೇವಿತ ಘೋರ ಕಾಂತಾರ
ಆ ಸುಧಾಕಲಿತಾನ್ನವೀ ಫಲ
ರಾಸಿಯಾದುದು ಗೇಯರಸ ವಿ
ನ್ಯಾಸವೇ ಮಧು ಮಕ್ಷಿಝಲ್ಲಿಕ ಜಂಬುಕ ಧ್ವಾನ ॥ ೨೧

## ೩. ಇಂದುವದನೆಯು ಸಂತವಿಟ್ಟ ಮುಕುಂದ

ಅರಸ ಕೇಳ್ಳೆ ದ್ವಾರಕಾಪುರ
ವರಕೆ ಬಂದುದು ವಾರ್ತೆ ಪೀತಾಂ
ಬರನ ಬಹಳಾಸ್ಥಾನದಲಿ ವರ್ತಿಸಿದುದಡಿಗಡಿಗೆ

ಧರೆಸಹಿತ ನಿಜವಸ್ತುವಾಹನ
ಪರಮವಿಭವವ ಬಿಸುಟು ಭಾರಿಯ
ಪರಿಭವದಿ ನಟ್ಟಡವಿಯೊಕ್ಕರು ಪಾಂಡುಸುತರೆಂದು || ೧

ಕೇಳಿ ತಲೆದೂಗಿದನು ಮೂಗಿನ
ಮೇಲುವೆರಳಿನ ಹೊತ್ತ ದುಗುಡದ
ತೂಳಿದುಬ್ಬೆಯ ನಟ್ಟನೋಟದ ನೆಗ್ಗಿನುತ್ಸವದ
ಹೂಳಿದೂಹೆಯ ಹಿಳಿದ ನೆನಹಿನ
ಹೇಳಲರಿದೆನೆ ಹುದಿದ ಭಾವದೆ
ಲಾಲಿಸಿದನಸುರಾರಿ ದೂತವ್ರಜದ ಬಿನ್ನಪವ || ೨

ಏನನೆಂಬೆನು ಜೀಯ ಕಡಃದು
ವ್ಯಾನದಲಿ ಹೊಱವಂಟು ಬಂದನು
ದಾನವಾಂತಕನೈದಿದವು ದಂಡಿಗೆಗಳರಸಿಯರ
ಆ ನಿಖಿಳ ನೃಪವರ್ಗ ಯಾದವ
ಸೇನೆ ಕವಿದುದು ಪಾಂಡುಪುತ್ರರ
ಕಾನನವ ಕರುಣಾಳು ಹೊಕ್ಕನು ಹಲವು ಪಯಣದಲಿ || ೩

ಇವರು ಬಂದರು ನಿಖಿಳಭೂಸುರ
ನಿವಹಸಹಿತಿದಿರಾಗಿ ವರಬಾಂ
ಧವರಿಗಭಿವಂದ್ಯರಿಗೆ ತತ್ಸಮರಿಗೆ ಕನಿಷ್ಠರಿಗೆ
ಅವರವರಿಗವರುಚಿತ ಸತ್ಕಾ
ರವನು ಮಾಡಿ ಮುರಾರಿಯಂಘ್ರಿಯ
ನವಿರಳಾಶ್ರುಗಳಿಂದ ನಾದಿದರರಸ ಕೇಳೆಂದ || ೪

ಬೇಱಬೇಱೈವರನು ತೆಗೆದು ಮು
ರಾರಿಯಪ್ಪಿದನಡಿಗಡಿಗೆ ದೃಗು
ವಾರಿಗಳನೊರಸಿದನು ಪೀತಾಂಬರದ ಸೆರಗಿನಲಿ
ಸಾರು ಸಾರೆಂಬುಗ್ಘಡಣೆಯ ವಿ
ಕಾರವೇಕಿನ್ನೆನುತ ರಾಯನ
ನಾರಿ ಬಂದಳು ಕವಿದುಬಿದ್ದಳು ಹರಿಯ ಚರಣದಲಿ || ೫

ಒಱಲಿದಳು ದೆಸೆಯೊಡನೊಱಲೆ ಮಿಗೆ
ಹೊಱಳಿದಳು ಹರಿಪಾದದಲಿ ಮೈ
ಮಱೆದಳಂಗನೆ ಮೈಯ ಮುಸುಕಿದ ಕೇಶಪಾಶದಲಿ
ಕಱಗಿದಳು ಕಂದಿದಳು ಮಮ್ಮಲ
ಮಱುಗಿ ಕಱುಗಂದಿದಳು ದೃಗುಜಲ
ದೊಱತೆಯುಕ್ಕಿತು ಮೇಲೆ ಮೇಲೆ ಮಹೀಶನಂಗನೆಗೆ || ೬

ಹಿಂದೆ ಸೆಳೆಸೀರೆಯಲಕಟ ಗೋ
ವಿಂದ ರಕ್ಷಿಸನಾಥನಾಥ ಮು
ಕುಂದ ಕಾಯೈ ಕೃಷ್ಣ ಕಾಯೈ ಕರುಣಿಸಸುರಾರಿ
ಇಂದಿರಾಪತಿಯೇ ಯಶೋದಾ
ನಂದನನೆ ಕಾರುಣ್ಯನಿಧಿ ಸಲ
ಹೆಂದಡುಳುಹಿದ ದೈವ ನೀ ಮೈದೋಱದೈ ತನಗೆ || ೭

ಕಾಯಿದೈ ಪ್ರಹ್ಲಾದ ಮಾರ್ಕಂ
ಡೇಯ ವನಗಜವಂಬರೀಷನ
ಕಾಯಿದೈ ಕಾರುಣ್ಯದಲಿ ಪಾತಕಿಯಜಾಮಿಳನ
ಕಾಯಿದೈ ಗೋವಿಂದಯೆನೆ ತ
ನ್ನಾಯತಿಕೆಯಭಿಮಾನವನು ನೀ
ಕಾಯಿದೈ ಹರಿಯೆನುತ ಪದದಲಿ ಹೊಱಳಿದಳು ತರಳೆ || ೮

ಏಳು ತಾಯೆ ಸರೋಜಮುಖಿ ಪಾಂ
ಚಾಲೆ ನೊಂದೌ ತಂಗಿಯೆನುತ ಕೃ
ಪಾಳು ಕಂಬನಿದೊಡೆದು ಕೊಡಹಿದನವಯವದ ರಜವ
ಮೇಲು ಮುಚ್ಚುಳದೆಱೆದ ತನುವಿನ
ಹೇಳಿಗೆಯ ಶೋಕಾಹಿಯಂತಿರೆ
ಲೋಲಲೋಚನೆಯಳಲು ಮಿಗೆ ಹೆಕ್ಕಳಿಸಿತಡಿಗಡಿಗೆ || ೯

ಮುಡಿಯ ಸಂವರಿಸಬಲೆ ಸೀರೆಯ
ನುಡು ನವಾಂಬರವಿದೆ ವಿರೋಧವ
ಬಿಡು ಸುಯೋಧನರಾಜಸಂತತಿಯುರಿದುದಿನ್ನೇನು

ಕೆಡಿಸಿಕೊಂಡರು ನಾಯ್ಗಳಿನ್ನದ
ನುಡಿದು ಫಲವೇನಕಟ ಕೈಕೊಂ
ಡಡವಿಯನುಭವ ಸವೆಯೆ ಸೈರಿಪುದೆಂದನಸುರಾರಿ || ೧೮

ತುಱುಬು ಕಟ್ಟುವ ಹದನ ನಿಮ್ಮಡಿ
ಯಱಿಯರೆಂಬೆನೆ ಸಕಲ ಸಚರಾ
ಚರದ ಚೇತನರೂಪದೇಹನಿಕಾಯಕೃತಿಸಾಕ್ಷಿ
ತಱಿದು ದುಶ್ಶಾಸನನ ವಕ್ಷದೊ
ಳೊಱಿವ ರುಧಿರದಲದ್ದಿ ಕಟ್ಟುವ
ತುಱುಬನಱಿಯಾ ಕೃಷ್ಣಯೆಂದಳು ನಗುತ ಪಾಂಚಾಲೆ || ೧೧

ಐಸಲೇ ದುರ್ಯೋಧನಾದಿಗ
ಳೀಸಱವದಿರು ಭೀಮಪಾರ್ಥರ
ಬೀಸಱಕೆ ಬಲುಗೈಯೆ ಬರ್ಹಿರ್ಮುಖರ ಭಾರವಣೆ
ದೂಷಕನ ರಕ್ತದಲಿ ನಿನ್ನಯ
ಕೇಶವನು ಕಟ್ಟಿಸುವೆ ನಿನ್ನಯ
ಭಾಷೆ ತನ್ನದು ತಾಯೆ ಚಿಂತಿಸಬೇಡ ಸಾಕೆಂದ || ೧೨

ವರತಪಸ್ವಿನಿ ನೀನು ನಿನ್ನನು
ಕೆರಳಿಚಿದರೇ ಕುನ್ನಿಗಳು ಮಿಗೆ
ಭರತ ಸಂತತಿ ಫಲಿತಕದಳಿಯ ಕೂಡೆ ಹೂಡಿತಲಾ
ಕುರುಡನಱಿಯದೆ ಹೋದಡೆಯು ಕಂ
ಗುರುಡರಾದರೆ ಭೀಷ್ಮವಿದುರಾ
ದ್ಯರು ಮಹಾದೇವೆನುತ ಮುರರಿಪು ತೂಗಿದನು ಶಿರವ || ೧೩

ಆಯಿತೇಳೌ ತಂಗಿ ನೀ ಹಿರಿ
ದಾಯಸವನನುಭವಿಸಲುದಿಸಿದೆ
ರಾಯನಾಡಿದ ಭಾಷೆ ಸಲಲಿ ವನಪ್ರವಾಸದಲಿ
ವಾಯುತನುಜನ ನುಡಿಯಲೇ ನಿ
ನ್ನಾಯತಿಕೆಯಹುದಾ ಪ್ರತಿಜ್ಞೆಗೆ
ತಾಯೆ ತಾ ಹೊಣೆಯೆಂದು ಕೊಟ್ಟನು ಸತಿಗೆ ನಂಬುಗೆಯ || ೧೪

ಸಂತವಿಟ್ಟನು ಬೇಱೆ ಬೇಱೆ ಕೃ
ತಾಂತಸುತ ಭೀಮಾದ್ಯರನು ಮುನಿ
ಸಂತತಿಯ ಮನ್ನಿಸಿದನವರ್ಗವರುಚಿತ ವೃತ್ತಿಯಲಿ
ಎಂತು ಹದಿಮೂಱಬುದವೀ ನೃಪ
ಸಂತತಿಗೆ ಸೌಹಾರ್ದವಕಟ ವ
ನಾಂತರದೊಳೆಂದಸುರರಿಪು ನುಡಿದನು ಯುಧಿಷ್ಠಿರಗೆ || ೧೫

ಕಳುಹುವುದು ಸೌಭದ್ರನನು ನೃಪ
ಲಲನೆಯರನವರವರ ತಾಯ್ಮನೆ
ಗಳಿಗೆ ಬೀಳ್ಕೊಡಿ ನಿಮ್ಮ ಪಂಚದ್ರೌಪದೀಸುತರ
ಹಳುವ ದಾಟಲಿ ದ್ರುಪದನಂದನೆ
ಯುಗಲಶಿಖಿಗಿಂಧನವಲೇ ಕುರು
ಕುಲದ ಕರಡದ ಬಣಬೆ ಕಾದುರುಹುವುದು ಕೇಳೆಂದ || ೧೬

ಎಂದು ಕಳುಹಿ ಸುಭದ್ರೆಯನು ನರ
ನಂದನನ ಬೀಳ್ಕೊಡಿಸಿದನು ನೃಪ
ನಂದನರ ಕಳುಹಿಸಿದನಾ ಪಾಂಚಾಲನೃಪನೊಡನೆ
**ಇಂದುವದನೆಯ ಸಂತವಿಟ್ಟು ಮು**
**ಕುಂದ** ರಥವೇಱಿದನು ಕುಂತೀ
ನಂದನರು ಕಳುಹುತ್ತ ಬಂದರು ಕಮಲಲೋಚನನ || ೧೭

ಬೀಳುಕೊಂಡರು ಕೃಷ್ಣನನು ಪಾಂ
ಚಾಲಪತಿಯನು ಪಂಚ ಕೈಕೆಯ
ಚೋಳ ಕೇರಳ ಪಾಂಡ್ಯ ಕುಂತೀಭೋಜ ಸೃಂಜಯರ
ಬೀಳುಕೊಟ್ಟರು ದುಷ್ಟಕೇತು ನೃ
ಪಾಲ ಮೊದಲಾದಖಿಳ ಧರಣೀ
ಪಾಲಕರು ದುಗುಡದಲಿ ಹೊಕ್ಕರು ತಮ್ಮ ನಗರಿಗಳ || ೧೮

ಕೇಳು ಜನಮೇಜಯ ಧರಿತ್ರೀ
ಪಾಲ ಪಾಂಡುಕುಮಾರರಟವಿಯ
ಪಾಳಿಯಲಿ ಪರುಠವಿಸಿದರು ಪದಯುಗಪಥಶ್ರಮವ

ಲೋಲಲೋಚನೆ ಸಹಿತ ತತ್ಕುಲ
ಶೈಲದಲಿ ತದ್ವಿಪಿನದಲಿ ತ
ತ್ಕೂಲವತಿಗಳ ತೀರದಲಿ ತೊಳಲಿದರು ಬೇಸಱದೆ ॥ ೧೯

ಫಲ ಮೃಗಾವಳಿ ಸವೆದುದಿನ್ನೀ
ಹಳುವ ಸಾಕಿನ್ನೊಂದರಣ್ಯ
ಸ್ಥಳವ ನೋಡಲಿ ಕಟಕ ನಡೆಯಲಿ ವಿಪ್ರಸಂಕುಳದ
ಸುಲಭವೀ ವನವೆಂದು ತಮ್ಮೊಳು
ತಿಳಿದು ಪಾರ್ಥ ಯುಧಿಷ್ಠಿರರು ಮುನಿ
ಕುಲ ಸಹಿತ ನಲವಿನಲಿ ಹೊಕ್ಕರು ದ್ವೈತಕಾನನವ ॥ ೨೦

ಆ ಸಮಯದಲಿ ಬಂದನಗ್ಗದ
ಭೂಸುರ ಶ್ರೀಕಂಠನೋ ಪ
ದ್ಮಾಸನನ ಪಲ್ಲಟವೊ ಕಮಲಾಂಬಕನ ಚುಂಬಕವೋ
ಭಾಸುರಕ್ರತು ಶತದ ರೂಪವಿ
ಳಾಸವೋ ಶ್ರುತಿಕೋಟಿಕನ್ಯಾ
ವಾಸ ಭವನವೊ ದೇವ ವೇದವ್ಯಾಸ ಮುನಿರಾಯ ॥ ೨೧

ಹಾ ಮಹಾದೇವಾ ಇದಾರು ಮ
ಹಾ ಮುನೀಶ್ವರರೆನುತ ಮುನಿಪ
ಸ್ತೋಮವೆದ್ದುದು ಧರ್ಮನಂದನನವರಿಗಿದಿರಾಗಿ
ಪ್ರೇಮಪುಳಕದ ನಯನಸಲಿಲದ
ರೋಮಹರುಷದ ಸತ್ಯಭಾವದ
ಭೂಮಿಪತಿ ಮೆಯ್ಯಿಕ್ಕಿದನು ಮುನಿವರನ ಚರಣದಲಿ ॥ ೨೨

ವಿವಿಧ ಮುನಿಗಳ ಗೋತ್ರನಾಮ
ಪ್ರವರ ಸಹಿತಭಿವಾದ ಕರ್ಮೋ
ತ್ಸವವ ಕೈಕೊಳುತಿವರನೆತ್ತಿದನುಗಿದು ಬಿಗಿಯಪ್ಪಿ
ಯುವತಿ ಪದಕೆಱಗಿದರೆ ಭೂಯಾ
ತ್ತ್ರವ ಮನೋರಥವೆನುತ ಮುದದಿಂ
ದವನಿಪಾಲನ ಪರ್ಣಶಾಲೆಗೆ ಮುನಿಪ ನಡೆತಂದ ॥ ೨೩

ಕರಸಿ ದ್ರುಪದಾತ್ಮಜೆಯ ಕಂಬನಿ
ಯೊಱತೆಯಾಱಲು ನುಡಿದನಾಕೆಯ
ಕರಣದಲಿ ಕಱಗೊಂಡ ಕಳಕಳವನು ವಿಭಾಡಿಸಿದ
ಧರಣಿಪತಿಗೇಕಾಂತ ಭವನದೊ
ಳೊರೆದನೀಶ್ವರ ಬೀಜಮಂತ್ರಾ
ಕ್ಷರವನಂಗೋಪಾಂಗ ಮುದ್ರಾಶಕ್ತಿಗಳು ಸಹಿತ || ೨೫

ಇದು ಮಹೇಶರ ಶೋಕಹರವಿಂ
ತಿದು ವಿರೋಧಿಬಲಪ್ರಭಂಜನ
ವಿದು ಸಕಲ ಪುರುಷಾರ್ಥಸಾಧನವಖಿಳ ದುರಿತಹರ
ಇದು ಮಹಾಧಿವ್ಯಾಧಿಹರವಿಂ
ತಿದನು ಕೈಕೊಂಡರ್ಜುನಂಗೊರೆ
ವುದು ರಹಸ್ಯದಲೆಂದು ಮುನಿ ಕರುಣಿಸಿದನರಸಂಗೆ || ೨೬

ಪಾರ್ಥನೈದುವುದಿಂದ್ರಕೀಲದ
ಲರ್ಥಿಸಲಿ ಶಂಕರನನಖಿಳ
ಸ್ವಾರ್ಥಸಿದ್ಧಿಗೆ ಬೀಜವಿದು ಬೇಱಿಂದ ಬಯಸದಿರು
ವ್ಯರ್ಥರವದಿರು ನಿಮ್ಮ ಹಗೆಯು ತ
ದರ್ಥಕದೊಳಿನ್ನೇನು ಜಗಕೆ ಸ
ಮರ್ಥನೊಬ್ಬನು ಶಂಭು ಕೃಪೆಮಾಡುವನು ನಿಮಗೆಂದ || ೨೭

ಇಂದು ಮುಖಿಯನು ಭೀಮನನು ಯಮ
ನಂದನಾರ್ಜುನ ಯಮಳರನು ನಲ
ವಿಂದ ಕೊಂಡಾಡಿದನು ಮೈದಡವಿದನು ಮೋಹಗಲಿ
ಬಂದು ಸಂದಣಿಸಿದ ಮಹಾದ್ವಿಜ
ವೃಂದವನು ಮನ್ನಿಸಿ ನಿಜಾಶ್ರಮ
ಮಂದಿರಕೆ ಮುದದಿಂದ ಬಿಜಯಂಗೈದನಾ ಮುನಿಪ || ೨೮

ನೆನಹು ನೆಮ್ಮಿತ್ತು ಶಿವನನಿತರದ
ಸನೆಕೊನೆಯ ತೆರಳಿಕೆಯ ತೊಡಚಿಯ
ಮನದ ಸಂಚಲವೀಚುವೋದುದು ಕಲಿಧನಂಜಯನ || ೯

ಮುಗುಳು ಗಂಗಳ ಮೇಲುಗುಡಿದೋ
ಳುಗಳ ಮಿಡುಕುವ ತುಟಿಯ ತುದಿಗಾ
ಲುಗಳ ಹೊರಿಗೆಯ ತಪದ ನಿರಿಗೆಯ ನಿಷ್ಪ್ರಕಂಪನದ
ಬಿಗಿದ ಬಿಲ್ಲಿನ ಬೆನ್ನಬತ್ತಳಿ
ಕೆಗಳ ಕಿಗ್ಗಟ್ಟಿನ ಕಠಾರಿಯ
ಹೊಗರಡಾಯುಧ ಹೊಸತಪವ ತೊಡಗಿದನು ಕಲಿಪಾರ್ಥ || ೧೦

ಅರಸ ಕೇಳೈ ವಿಪ್ರವೇಷವ
ಧರಿಸಿ ಧರೆಗಿಳಿದನು ಸುರೇಶ್ವರ
ತರಹರಿಸದೀ ಮಾತ ನುಡಿದನು ನಿಜಕುಮಾರಂಗೆ
ಮರಿಚ ಮೌಕ್ತಿಕ ಲೋಹ ಹೇಮಾ
ಭರಣ ಚರ್ಮ ದುಕೂಲ ಮಿಳಿ ಹಾ
ದರಿಯ ಹೂವಿನ ದಂಡೆಗೇಕನಿವಾಸವೇಕೆಂದ || ೧೧

ಆವ ಸೇರುವೆ ತಪಕೆ ಚಾಪ ಶ
ರಾವಳಿಗೆ ಶಮೆ ದಮೆಗೆ ಖಡ್ಗಕಿ
ದಾವ ಸಮ್ಮೇಳನ ವಿಭೂತಿಗೆ ಕವಚ ಸೀಸಕಕೆ
ಆವುದಿದಱಭಿಧಾನ ತಪವೋ
ಡಾವರಿಗ ವಿದ್ಯಾಸಮಾಧಿಯೊ
ನೀವಿದೆಂಥಾ ಋಷಿಗಳೆಂಬುದನಱಿಯೆ ನಾನೆಂದ || ೧೨

ಕಂದೆಱದು ನೋಡಿದನು ನೀವೇ
ನೆಂದಡೆಯು ಹೃದಯಾಬ್ಜಪೀಠದೊ
ಳಿಂದುಮೌಳಿಯನೊಲಿದು ಮೆಚ್ಚಿಸುವೆನು ಸಮಾಧಿಯಲಿ
ಇಂದಿನೀ ಬಹಿರಂಗ ಚಿಹ್ನದ
ಕುಂದು ಹೆಚ್ಚಿನಲೇನು ಫಲವೆನ
ಲಂದು ತಲೆದೂಗಿದನು ಸುರಪತಿ ತೋಱದನು ನಿಜವ || ೧೩

ಮಗನೆ ನಿನ್ನಯ ಮನದ ನಿಷ್ಠೆಗೆ
ಸೊಗಸಿದೆನು ಹಿರಿದಾಗಿ ಹರಸಿ
ಲ್ಲಿಗೆ ಬರಲಿ ಕರುಣಿಸಲಿ ನಿನ್ನ ಮನೋಭಿವಾಂಛಿತವ
ಹಗೆಗೆ ಹಱವಹುದೆಂದು ಸುರವಮೌ
ಳಿಗಳ ಮಣಿ ಸರಿದನು ವಿಮಾನದ
ಲಗಧರನ ಮೈದುನನ ಮಹಿಮೆಯನಱವರಾರೆಂದ || ೧೪

ಮರಳಿದನು ದೇವೇಂದ್ರನಿತ್ತಲು
ಹರನೊಡನೆ ಹೊರೆಯೇಱತಂತಃ
ಕರಣ ಹಿಗ್ಗಿತು ಹುದುಗಿದನು ಬಹಿರಂಗಭಾವನೆಯ
ಧರಣಿ ಮೊದಲೆನೆ ಭೂತಪಂಚಕ
ಮರುತುಪಂಚಕ ವಿಷಯದಿಂದ್ರಿಯ
ಕರಣವಿಪ್ಪತ್ತೈದು ತತ್ವಾತ್ಮಕನ ಚಿಂತಿಸಿದ || ೧೫

ಮೂಱುದಿನಕೊಮ್ಮೊಮ್ಮೆ ಫಲದಾ
ಹಾರದಲಿ ನೂಕಿದನು ತಿಂಗಳ
ನಾಱುದಿವಸಕೆ ಫಲವ ಕೊಂಬನು ತಿಂಗಳೆರಡಱಲಿ
ಮೂಱುತಿಂಗಳ ಕಳೆದನಿಂತೀ
ಱಾಱುದಿವಸಕೆ ಕಂದಮೂಲಾ
ಹಾರವಲಿ ತಱಗೆಲೆಯಲಿರ್ದನು ನಾಲ್ಕು ಮಾಸದಲಿ || ೧೬

ಬಳಿಕ ಪವನಾಹಾರವಲಿ ನಿ
ಸ್ಖಲಿತ ಶಿವಪದ ಭಕ್ತಿಸುಧೆಯಲಿ
ತಳಿತ ರೋಮಾಂಚನದ ಕಂದದ ಕುಂದದವಯವದ
ಥಳಥಳಿಸುವಾನನದ ಸತ್ಪೋ
ಚ್ಚಲಿತ ಚಿತ್ತದ ಸುಪ್ರಭಾವದ
ಬಳವಿಗೆಯಲುತ್ಕೋಚವಾದುದು ತಪ ಧನಂಜಯನ || ೧೭

ತಾನು ಶಿವನೋ ಮೇಣು ಶಿವನ
ಧ್ಯಾನ ತನಗದ್ವೈತದನುಸಂ
ಧಾನಕಿದು ಜವನಿಕೆಯೋ ಜೀವಾತುಮನ ಜಂಜಡಕೆ

ಧ್ಯಾನವೋ ಮೋಹ್ ಧೈರ್ಯವೋ ತ
ದ್ಧ್ಯಾನ ಕರ್ತುವೋ ತ್ರಿಪುಟಿ ರಹಿತನೊ
ತಾನು ಮೋಹೆನಲಾಯ್ತು ಚಿತ್ತದ ಶುದ್ಧಿಯರ್ಜುನಗೆ ॥ ೧೮

ಮೇಲೆ ಮೇಲೀತನ ತಪೋಗ್ನಿ
ಜ್ವಾಲೆ ಜಡಿದುದು ತಡೆದುದಭ್ರ
ಸ್ಥಾಳಿಯಲಿ ಸೈವರಿದು ಸೂರ್ಯಾಚಂದ್ರಮಪ್ರಭೆಯ
ಡಾಳಿಸುವ ಪರಿಧೌತ ಮೌನಕ
ರಾಳತೇಜೋಗರ್ಭತಮಧೂ
ಮಾಳಿಯಲಿ ಮೇಘಾಳಿ ಮುಸಗಿತು ಭೂಪಕೇಳೆಂದ ॥ ೧೯

ಏನನೆಂಬೆನು ಪಾರ್ಥನುಗ್ರ ತ
ಪೋನಿದಾಘಜ್ವಾಲೆಯನು ಸಂ
ಧಾನವನು ತತ್ಪರಿಸರದ ಪಾವನ ತಪೋಧನರ
ಮೌನವುಱಿ ಸೀದುದು ಜಪಾನು
ಷ್ಠಾನ ಬಿಡೆ ಬೆವರಿತು ಸಮಾಧಿ
ಧ್ಯಾನ ಸೀಕರಿಯಾಯ್ತು ಸಾರವಿಚಾರ ಶಮಸಹಿತ ॥ ೨೦

ಕೆದಱಿದವು ಜಡೆ ಯಕ್ಷಮಾಲೆಗ
ಳುದುರಿದವು ಕರದಲಿ ಕಮಂಡಲು
ವದುರಿದವು ಹಳಿವಾಯ್ತು ಹರಿಣಾಜಿನ ಮುನೀಶ್ವರರ
ಕದಡಿತಂಗವಿಭೂತಿ ಕಡುಗೋ
ಪದಲಿ ಹರಿದರು ಹರಗಿರಿಯ ಹ
ತ್ತಿದರು ಕಂಡರು ರಾಜಮೌಳಿಯ ರಾಜಮಂದಿರವ ॥ ೨೧

ಶಿವನ ಭವನವ ದೂರದಲಿ ಕಂ
ಡವರು ಮೆಯ್ಯಿಕ್ಕಿದರು ವರಮುನಿ
ನಿವಹ ಬಂದುದು ಬಾಗಿಲವದಿರು ಬಿನ್ನಹದ ಹದನ
ವಿವರಿಸಲು ಕರೆಸಿದನು ಕರುಣಾ
ರ್ಣವನ ಕಂಡರು ವೈಯ್ಯ ಚಾಚಿದ
ರವನಿಯಲಿ ಜಯಜಯ ಮಹೇಶ ನಮಶ್ಶಿವಾಯೆನುತ ॥ ೨೨

ಏಳಿರೈ ಸಾಕೇಳಿರೈ ಸಾ
ಕೇಳಿ ಕುಳ್ಳಿರಿ ಬಂದ ಕಾರ್ಯವ
ಹೇಳಿಯೆನೆ ಮುನಿನಿಕರವೆದ್ದುದು ನೊಸಲ ಕೈಗಳಲಿ
ಹೇಳಿ ನೀವ್ ಹೇಳಿನ್ನು ಹಿರಿಯರು
ಹೇಳಿಯೆನುತೊಳಗೊಳಗೆ ಘೋಳಾ
ಘೋಳಿ ಮಸಗಿದುದೊಬ್ಬ ಮುನಿ ನಿಲಿಸಿದನು ಕಳಕಳವ || ೨೩

ನೀಲಲೋಹಿತ ಚಿತ್ತವಿಸು ಶಶಿ
ಮೌಳಿ ಬಿನ್ನಹ ನಿಗಮ ಮಹಿಳಾ
ಮೌಳಿರತ್ನವಿರಾಜಿತಾಂಘ್ರಿಸರೋಜ ಅವಧಾನ
ಪಾಲಿಸುವುದಾರ್ತರನು ಪರಮಕೃ
ಪಾಳು ನೀನತಿ ದೀನರಾವು ವಿ
ಟಾಳ ಸಂಗತಿಯಾದುದೆಮ್ಮಯ ಜಪ ತಪಸ್ಥಿತಿಗೆ || ೨೪

ಹೋದ ಹೊಲಬಿಲ್ಲಿದಟವಿಯೊಳಗೆ ದು
ರ್ಭೇದ ತಪವೇ ಹೊಗೆವುತದೆ ಹೊ
ಳ್ಳಾದವೆಮ್ಮ ಸಮಾಧಿ ಸ್ಥೈರಣೆ ಶಮ ದಮಾದಿಗಳು
ಕಾದುದಾ ವನಭೂಮಿ ತರು ಗು
ಲ್ಮಾದಿಗಳು ಕಟ್ಟೊಣಗಿಲಾದುವು
ತೀದುದೊಬ್ಬನ ದೆಸೆಯಲೆಮ್ಮಯ ನಿತ್ಯವಿಧಿಯೆಂದ || ೨೫

ರಾಯನೋ ಮೋಣವನು ರಾವುತ
ಪಾಯಕನೊ ಋಷಿಯಲ್ಲ ಋಷಿಗೇ
ಕಾಯುಧಂಗಳ ಗೊಡವೆ ನಮಗೇಕದಟ ಬೂತಾಟ
ಸಾಯಕದ ಬತ್ತಳಿಕೆ ಚಾಪವ
ಡಾಯುಧದ ಕುಶಿವೆರಳ ಜಡೆಗಳ
ನಾಯತದಲನುಚಿತದ ಸಂಗದ ತಪಸಿಯವನೆಂದ || ೨೬

ಆಡಿದಡೆ ನಾವ್ ಋಷಿಗಸೂಯುವ
ಮಾಡಿದವರಿಂದ ನಿಮ್ಮಡಿಗೆ ನಾ
ವಾಡದಿರ್ದಡೆ ಬಿಸಿಲ ರಾಶಿಯನುರಿಯ ಸೂತಕವ

ಕೂಡಿತೆಮ್ಮಯ ನಿತ್ಯವಿಧಿ ತಪ
ಗೇಡಿಯನು ಬಿಡದೆಬ್ಬಿಸೆಮಗೆಡೆ
ಮಾಡಿಕೊಡಬೇಕೆಂದು ಮತ್ತೆಱಗಿತು ಋಷಿಸ್ತೋಮ ॥ ೨೭

ಕೇಳುತವನಾರೋಯೆನುತ ಶಶಿ
ಮೌಳಿ ನಿರ್ಮಲಜ್ಞಾನಮುದ್ರೆಯು
ಲಾಳನಱಿದನು ಮನದೊಳಗೆ ನಮ್ಮವನಲಾಯೆನುತ
ಬಾಲಹಿಮಕರಕಿರಣದೊಡನೆ ಸ
ಮೇಳವಹ ನಗೆ ಮಿನುಗೆ ಮುನಿ
ಜಾಲವನು ನೋಡಿದನು ಸುರಿದನು ಕೃಪೆಯ ತನಿರಸವ ॥ ೨೮

ಅಱಿದೆವಾವಂಜದಿರಿ ಹುಯ್ಯಲ
ಬಱಿದೆ ತೆಂದಿರಿ ನಿಮ್ಮ ನೆನಹಿಂ
ಗೆಱಗುವವನಲ್ಲವನು ಬೇಱಿಹುದಾತನಂಘವಣೆ
ಅಱುಹಲೇಕೆ ಭವತ್ತಪೋವನ
ನೆಱೆ ನಿಮಗೆ ನಾವವನನೆಬ್ಬಿಸಿ
ತೆಱಹ ಮಾಡಿಸಿಕೊಡುವೆವೆಂದನು ನಗುತ ಮದನಾರಿ ॥ ೨೯

ಏಳಿ ನೀವಾಶ್ರಮಕೆ ಹೋಗಿ ಛ
ಡಾಳಿಸದು ಮುನಿವರನ ತಪವಿ
ನ್ನೇಳಿ ದಿಟ ಭಯವಿಲ್ಲವೆಂದು ಕರಾಂಬುಜವ ನೆಗಹಿ
ಬೀಳುಕೊಟ್ಟನು ಸಕಲ ಮುನಿಜನ
ಜಾಲವನು ಕರೆ ಭೂತನಿಕರವ
ಮೇಳವಿಸಹೇಳೆಂದು ನಂದೀಶ್ವರಗೆ ನೇಮಿಸಿದ ॥ ೩೦

## ೫. ಕೆಣಕಿದನು ಶಿವನ

ಅರಸ ಕೇಳ್ಳೆ ಬೇಂಟೆಯೆಂದೀ
ಶ್ವರನ ಕಟಕದಲೊದಱಿದುದು ಡಂ
ಗುರದ ದನಿ ಡಾವರದಲೈದಿತು ನಿಖಿಳ ಭೂತಚಯ

ಪರಮಕರುಣಾಸಿಂಧು ಭಕ್ತನ
ಹೊರೆವ ಭರದಲಿ ಭೂರಿಮೃಗಯಾ
ಚರಣೆಗೋಸುಗ ಶಬರವರರೂಪದಲಿ ರಂಜಿಸಿದ || ೧

ತೆಗೆದು ತಲೆಮಾಲೆಯನು ಹಸುರಂ
ಗಿಗಳ ತೊಟ್ಟನು ಸುತ್ತುವರೆ ಹೀ
ಲಿಗಳ ಹರಹಿನ ಪಾರಿವದ ಚೆಲ್ಲಣವ ವೆಂಠಣಿಸಿ
ಬಿಗಿಜಡೆಯ ಶಶಿಮುಖಕೆ ಪತ್ರಾ
ಳಿಗಳ ಕಟ್ಟಿ ಕಿರಾತವೇಷದ
ವಿಗಡ ದೇವರದೇವ ಕೊಂಡನು ಚಾಪ ಮಾರ್ಗಣವ || ೨

ದೇವನನುರೂಪದಲಿ ನಿಂದರು
ದೇವಿಯರು ಗುಹ ಗಣಪತಿಗಳೆ
ಲ್ಲಾ ವಿನೋದವ ನೋಡಿ ಧರಿಸಿದರೊಲಿದು ಶಾಬರವ
ಆ ವಿಗಡ ನಂದೀಶ ವೀರಕ
ದೇವಲಕ ರೇಣುಕ ಮಹೋದರ
ದಾವಶಿಖಿಮುಖ ವೀರಭದ್ರಾದ್ಯಖಿಳ ಭೂತಗಣ || ೩

ಅರಸ ಕೇಳೈ ಸಪ್ತಮಾತೃಕೆ
ಯರು ಮಹೋಪನಿಷನ್ನಿತಂಬಿನಿ
ಯರು ದಿಶಾದೇವಿಯರು ಶ್ರುತಿವಿದ್ಯಾದಿ ಶಕ್ತಿಯರು
ಉರಗಿಯರು ವಿದ್ಯಾಧರಿಯರ
ಪ್ಸರಿಯರೌಷಧ ಮಂತ್ರದೇವತೆ
ಯರು ಪುಳಿಂದಿಯರಾಯ್ತು ಪರಮೇಶ್ವರಿಯ ಬಳಸಿನಲಿ || ೪

ಜಾಳಿಸಿದ ಹದವಿಲ್ಲುಗಳ ಬಡಿ
ಕೋಲುಗಳ ಸಂಕಲೆಯ ನಾಯ್ಗಳ
ಕೋಲುವಲೆಗಳ ಕವಣೆವಲೆ ದಡಿವಲೆಯ ಸಿಡಿವಲೆಯ
ಕಾಲುಕಣ್ಣಿಯ ಹೆಬ್ಬಲೆಯ ಬೆ
ಳ್ವಾಲಹೊಱೆಗಳ ಗಳೆಗಳಂಟಿನ
ಘಾಳಿಗೊಂಬಿನ ಬೇಂಟೆಕಾಱರು ಹರನ ಬಳಸಿನಲಿ || ೫

ಹೇಳುವರೆ ರೋಮಾಂಚನವಲೇ
ಕೇಳು ನೃಪ ಕೈಲಾಸವಾಸಿಯು
ಲೀಲೆಯನು ನಿಜಭಕ್ತಜನ ಸಂದರ್ಶನಾರ್ಥವಲಿ
ಆಳು ನಡೆತಂದಿಂದ್ರಕೀಲದ
ಶೈಲವನು ಬೆಱಸಿತು ಮಹಾದ್ಭುತ
ದೇಳಿಗೆಯನೇನೆಂಬೆನೈ ಕೈರಾತ ವಿಭ್ರಮವ ॥ ೬

ಇಂಬಿನಲ್ಲಿಹ ಮೂಕದಾನವ
ನೆಂಬನೊಬ್ಬನು ತನ್ಮಹಾದ್ರಿನಿ
ತಂಬವನದ ನಿಕುಂಜದಲಿ ನಿರ್ಭಯ ವಿಹಾರದಲಿ
ಚುಂಬಿಸಿತು ಬಲು ರಭಸವದು ವಿಲ
ಯಾಂಬುಧಿಯ ಕಳಕಳವನಮರರ
ತಿಂಬೆನೀಕ್ಷಣವೆನುತ ಖಳನಾಲಿಸಿದನಾ ಧ್ವನಿಯ ॥ ೭

ಹಂದಿಯಾದನು ದನುಜನಾ ಗಿರಿ
ಕಂದರವ ಹೊಱವಂಟು ಬೇಂಟೆಯ
ಮಂದಿಯೊಳಗಡಹಾಯ್ದ್ವುತೆತ್ತಿದನಡ್ಡಬಿದ್ದವರ
ಹಂದಿಯೋ ತಡೆ ನಾಯ್ಗಳನು ಬಿಡು
ಹಿಂದ ಹಿಡಿ ಕೆಡೆಗುತ್ತು ಕೈಕೊ
ಳ್ಳೆಂದು ಗಜಬಜಿಸಿತ್ತು ಗಾವಳಿ ಗಹನಮಧ್ಯದಲಿ ॥ ೮

ಕೂಡೆ ಕಟ್ಟಿತು ಭೂತಗಣ ದನಿ
ಮಾಡಿ ಜಡಿದುಪ್ಪರಿಸಿ ಮೋಱೆಯ
ನೀಡಿ ನಾಯ್ಗಳು ತುಡುಕಿದವು ತಿರುಗಿದರೆ ಹಿಮ್ಮಡಿಯ
ಝಾಡಿಸುವ ಕವಿದೆಕ್ಕಲಂದೋ
ಡಾಡಿ ಬಿರಿದುದು ನೂಱು ಘಾಯದಿ
ನೋಡುತಿರ್ದುದು ಸೇನೆ ಕಂಡನು ಶೂಲಿ ಸೂಕರನ ॥ ೯

ಇದುವೆ ಸಮಯವಲಾ ಯೆನುತ ಹೂ
ಡಿದನು ಬಾಣವನುಗಿದು ಪೂರಾ
ಯದಲಿ ತೂಗಿ ಪಿನಾಕಿ ಯೆಚ್ಚನು ಮೂಕದಾನವನ

ಒದೆದು ಹಾಯ್ದುದು ಬಾಣ ಗಱಿತೋ
ಱಿದುದು ಬದಿಯಲಿ ಕೊಡಹಿ ಘೀಳಿಡು
ತದು ಧನಂಜಯನತ್ತ ಹರಿದುದು ಹೊತ್ತ ಕಣೆಸಹಿತ || ೧೦

ಕಂಡನರ್ಜುನನೀ ವರಾಹನ
ದಂಡಿ ಲೇಸಲ್ಲೆನುತ ಬಾಣವ
ಗಾಂಡಿವದೊಳಳವಡಿಸಿ ಬೊಬ್ಬಿಱಿದೆಚ್ಚನಾ ಖಳನ
ದಿಂಡುಗೆಡೆದನು ಕಾಲುಗೊಡಹುತ
ಗಂಡಶೈಲದ ವೋಲು ಭೂತವ
ದಿಂಡುದಱಿದಾ ಹಂದಿ ಬಿಡ್ದುದು ಪಾರ್ಥ ನಿದಿರಿನಲಿ || ೧೧

ಬಂದನೀಶ್ವರ ನಾವು ಕೆಡಹಿದ
ಹಂದಿ ನಮ್ಮದು ತೆಗೆಯಿಯೆನೆ ನರ
ನೆಂದನೆನ್ನಂಬಿನಲಿ ಬಿಡ್ದುದು ಸಾಱು ನೀನೆನಲು
ಬಂದುದೇಕಾಮಿಷ ವಿರೋಧದ
ಕಂದು ಪಾರ್ಥನ ಚಿತ್ತದಲಿ ಬಾ
ಲೇಂದು ಧರನೆಂದೆತ್ತ ಬಲ್ಲನು **ಕೆಣಕಿದನು ಶಿವನ** || ೧೨

ಎಲೆ ಕಿರಾತ ಮದೀಯ ಬಾಣದ
ಬಲೆಗೆ ನೀ ಮೃಗವಾಗದಿರು ನಿ
ನ್ನಳವ ಮೆಱೆಯ್ಯೆ ಬನದ ನರಿ ಪೊಲ ಹುಲ್ಲೆ ಹರಿಣನಲಿ
ಗೆಲಿದ ಗರುವನು ನೀನು ನಿನ್ನ
ಗ್ಗಳಿಕೆಗಾವಂಜುವೆವೆ ನಿನ್ನೀ
ದಳಕೆ ಪತಿಯುಂಟಾದೊಡಾತನ ಕೊಂಡು ಬಾಯೆಂದ || ೧೩

ಎನಲು ನಕ್ಕನು ಶಂಭು ಭಕ್ತನ
ಮನದ ಧೃತಿಯನು ಭುಜಬಲವನಾ
ತನ ಪರಾಕ್ರಮಲಕ್ಷ್ಮಿಯನು ಪಾರ್ವತಿಗೆ ತೋಱಿಸುತ
ನೆನೆದು ನುಡಿದನಿದೇನು ತಮ್ಮಡಿ
ನಿನಗೆ ತಪದಲಿ ಖಡ್ಗವೇಕೀ
ಧನು ಶರಾವಳಿಯೇಕೆ ನಿನ್ನಂಘವಣೆಯೇನೆಂದ || ೧೪

ಏಕೆ ನಿನಗೀ ತಪದ ಚಿಂತೆ ವಿ
ವೇಕ ಶಾಸ್ತ್ರವಿಚಾರವಿದು ವಿಪಿ
ನೌಕಸರ ಸಂಹಾರ ವಿದ್ಯಾವೃತ್ತಿ ನಿನ್ನದಲೆ
ಆಕೆವಾಳರ ಕರೆಸು ನೀನೇ
ಕಾಕಿ ನಿನ್ನಲಿ ಹಱಿಯದಾಹವ
ವೇಕೆ ನಿನಗೀಗೆಂದು ಕಪಟ ಕಿರಾತನನು ಜಱಿದ || ೧೫

ನೀವು ಬಲ್ಲಿರಿ ಶಾಸ್ತ್ರದಲಿ ಶ
ಸ್ತ್ರಾವಳಿಯುಲಾವಿಂದು ಪಕ್ಷಿ ಮೃ
ಗಾವಳಿಯ ಬೇಂಟೆಯಲಿ ಬಲ್ಲೆವು ಜಾತಿಧರ್ಮವಿದು
ನೀವು ಬಲುಹುಳ್ಳವರು ನಿಮ್ಮೊಡ
ನಾವು ಸೆಣಸುವರಲ್ಲ ನಿಮ್ಮೊಳ
ಗಾವ ಋಷಿ ಶಸ್ತ್ರಜ್ಞನಾತನ ಬಿರುದ ತಡೆಯೆಂದ || ೧೬

ಕಟಕಿಯೇಕೆ ಪುಳಿಂದ ನಾವು
ಬ್ಬಟೆಯ ತಪಸಿಗಳೆಂಬುದಿದು ಪರಿ
ಸ್ಫುಟವಲೇ ತಪ್ಪೇನು ನಿನ್ನೊಡನೆಂದು ಫಲವೇನು
ಜಟೆ ಮೃಗಾಜಿನ ಭಸ್ಮದೊಡನು
ತ್ಕಟ ಧನುಃಶ್ಶರ ಖಡ್ಗದಲಿ ಧೂ
ರ್ಜಟಿಯಿಹನು ನಾವವರ ಶಿಷ್ಯರು ಶಬರ ಕೇಳೆಂದ || ೧೭

ಲೋಕ ಶಿಕ್ಷಕರಲ್ಲಲೇ ನಮ
ಗೇಕೆ ನಿಮ್ಮಯ ತಪದ ಚಿಂತೆ ಪಿ
ನಾಕಧರನಡಹಾಯ್ದರೆಯು ಬಿಡೆವೆಮ್ಮ ವಾಸಿಗಳ
ಈ ಕಳಂಬವಿದೆಮ್ಮದೆನುತ ವ
ನೌಕಹದ ನೆಳಲಿನಲಿ ನಿಂದು ಪಿ
ನಾಕಿ ನುಡಿದನು ಕಡಿದನೀತನ ಮನದ ಸೈರಣೆಯ || ೧೮

ಮಸಗಿದನು ನಿನ್ನಾತನುಗಿದೆ
ಬ್ಬಿಸಿದ ಹುಲಿಯೋ ನೊಂದ ಹಂದಿಯೊ
ಹಸಿದ ಭುಜಗನೊ ಕಾದ ಕಟ್ಟುಕ್ಕಿನ ಛಡಾಳಿಕೆಯೋ

ಉಸುರುಗಳ ಕರ್ಬೊಗೆಗಳಾಲಿಯು
ಬಿಸುಗುದಿಯು ಬಲುಕೆಂಡವಂಬಿನ
ಹೊಸವುಸೆಗಳುರಿ ಝಾಡಿ ಝಳಪಿಸೆ ಪಾರ್ಥ ಖತಿಗೊಂಡ || ೧೯

ಆದೊಡಿದ ಕೊಳ್ಳೆನುತ ಕೆನ್ನೆಗೆ
ಸೇದಿ ಬಿಟ್ಟನು ಸರಳನದು ಹಿಂ
ದಾದುದಾ ಬಳಿ ಸರಳನದು ಹಿಂದಿಕ್ಕಿ ಮತ್ತೊಂದು
ಹೋದುದದ ಹಿಂದಿಕ್ಕಿ ಮತ್ತೊಂ
ದೈದಿತತಿ ವೇಗಾಯ್ಲತನದನು
ವಾದಸಾಧ್ಯದ ಸರಳು ಕವಿದವು ಬಿಟ್ಟ ಸೂಟಿಯಲಿ || ೨೦

ಮಂಜು ಮುಸುಕಿದಡೇನು ಪರ್ವತ
ವಂಜುವದೆ ಹಾಲಾಹಲವ ನೊಣ
ನೆಂಜಲಿಸುವುದೆ ವಡಬಶಿಖಿ ನೆನೆವುದೆ ತುಷಾರದಲಿ
ಕಂಜನಾಳದಿ ಕಟ್ಟುವಡೆವುದೆ
ಕುಂಜರನು ನರಶರದ ಜೋಡಿನ
ಜುಂಜುವೊಳೆಯಲಿ ಜಾಹ್ನವೀಧರ ಜಾಱುವನೆಯೆಂದ || ೨೧

ಕೆರಳಿದನು ಹೇರಂಬ ಗುಹನ
ಬ್ಬರಿಸಿದನು ರೋಷದಲಿ ಮಸಗಿತು
ಥರಥರದ ವರವೀರಭದ್ರಾದ್ಯಖಿಳ ಭೂತಗಣ
ಹರನು ಕಂಡನಿದೇನಿದೇನ
ಚ್ಚರಿ ಧನಂಜಯನೆಮಗೆ ನೂರ್ಮಡಿ
ಕರಹಿತವ ನಿಮ್ಮಿಂದ ನೀವ್ ಗಜಬಜಿಸಬೇಡೆಂದ || ೨೨

ಎನುತ ಕೊಂಡನು ಧನುವನಾ ಪಾ
ರ್ಥನ ಶರೌಘವನೆಚ್ಚಡೀಶನ
ಮೊನೆಗಣೆಯುಲಕ್ಕಾಡಿದವು ಬಾಡಿದವು ಬಳಿಸರಳು
ಕನಲಿ ಕಿವಿವರೆಗುಗಿದು ಫಡ ಹೋ
ಗೆನುತ ಮಗುಳೆಚ್ಚನು ಧನಂಜಯ
ನನಿತು ಶರವನು ಕಡಿದು ಮದನವಿರೋಧಿ ಮಗುಳೆಚ್ಚ || ೨೩

ಎಸುಗೆಯೊಳ್ಳಿತು ಶಬರನತಿ ಸಾ
ಹಸಿಕನ್ಯೆ ಬಿಲ್ಲಾಳಲಾ ಸರಿ
ಬೆಸನನೆಚ್ಚನು ನಮ್ಮೊಡನೆ ಮಝು ಪೂತು ಪಾಯ್‌ಕೆನುತ
ಹೊಸಮಸೆಯ ಹೊಗರಲಗುಗಳ ದ
ಳ್ಳಿಸುವ ಧಾರೆಯ ಕೆಂಗಱಿಯ ಧಾ
ಳಿಸುವ ಕಣೆಗಳ ಶರನಿಧಿಯ ಕವಿಸಿದನು ಕಲಿಪಾರ್ಥ || ೨೪

ಏಸು ಮಂತ್ರಾಸ್ತ್ರದಲಿ ಮುಸುಕಿದ
ಡೈಸುವನು ಹರ ನುಂಗಿದನು ಮಗು
ಳೇಸು ತೂರಂಬುಗಳಲೆಚ್ಚಡೆ ಕಡಿದನಂಬಿನಲಿ
ಈಸು ವೆಗ್ಗಳರಾರೆನಿಪ ಜಿ
ಜ್ಞಾಸೆ ಬೇಡಾ ಕ್ಷಾತ್ರತಾಮಸ
ವೇಸು ಬಲುಹೋ ನಿಮ್ಮ ಜಾತಿಗೆ ಭೂಪ ಕೇಳೆಂದ || ೨೫

ಅಂದು ಖಾಂಡವವನದ ದಹನದಿ
ಬಂದುದಕ್ಷಯ ಬಾಣವಿದು ತಾ
ನಿಂದು ಬಱಿತುದೆ ಬಹಳಜಲನಿಧಿ ಬತ್ತುವಂದದಲಿ
ಇಂದುಮೌಳಿಯ ಸೇವೆಗಿಂದು ಪು
ಳಿಂದ ಕಂಟಕನಾದನೇ ಹಾ
ಯೆಂದು ಘರ್ಜಿಸಿ ಚಾಪದಿಂದಪ್ಪಳಿಸಿದನು ಶಿವನ || ೨೬

ಕಳಚಿದನು ದಂಡೆಯಲಿ ಘಾಯವ
ನಳುಕಿದನಲಾಯೆನುತ ಮಗುಳ
ಪ್ಪಳಿಸಿದನು ಮೇಲ್ವಾಯ್ದು ಹೊಯ್ದನು ಜಱಿದು ಝೋಂಪಿಸುತ
ಮೆಲುನಗೆಯಲರ್ಜುನನ ಚಾಪವ
ಸೆಳೆದುಕೊಂಡನು ತನ್ನ ಭಕ್ತನ
ಬಳವಿಗೆಯ ಮಾಡಿದನುಘೇಯೆಂದುದು ಸುರಸ್ತೋಮ || ೨೭

ತಿಳಿವನುಗಿದಡಿಗಿಕ್ಕಿ ಮಱವೆಯ
ಕಳಕಳಕೆ ಮೇಲ್ವಾಯ್ದು ತಾಮಸ
ಜಲನಿಧಿಯ ತಾಯ್‌ಮಳಲ ಮುಟ್ಟಿತು ಮನ ಧನಂಜಯನ

ಸೆಳೆದನೊಱೆಯುಲಡಾಯುಧವ ಬೀ
ಳಲವೊ ಶಬರಾ ಯೆನುತ ಹೊಯ್ದನು
ತಳಿರೆಲೆಯ ತಳೆದೆಳೆವೆಱೆಯ ನೆಲೆವನೆಯ ಪಶುಪತಿಯ || ೨೮

ಮರನ ಹೆಗ್ಗೊಂಬುಗಳಲಿಟ್ಟನು
ತಿರುಹಿ ಕಲು ಗುಂಡುಗಳ ಮಳೆಯಲಿ
ಹರನ ಮುಸುಕಿದನೇನನೆಂಬೆನು ಪಾರ್ಥನುರವಣೆಯ
ಸರಳಸಾರದಲನಿತುವನು ಕ
ತ್ತರಿಸಿ ಕರುಣಾಜಲಧಿ ನುಡಿದನು
ಮರುಳು ತಮ್ಮಡಿ ಕೈದುವುಳ್ಳರೆ ಕೊಂಡು ಬಾ ಎಂದ || ೨೯

ಕೈದುವೇಕೆ ಪುಳಿಂದ ನಮ್ಮೊಡ
ನೈದಿಸಾ ಭುಜಯುದ್ಧದಲಿ ಬಲು
ಗೈದುವಿದಲಾ ಮುಷ್ಟಿ ನಿನಗದುಪಾಯ ಚೊಕ್ಕೆಯುವ
ಕಾದುಗೊಳ್ಳನುವಾಗು ನಿನ್ನವ
ರೈದಿ ನೋಡಲಿಯೆಂದು ಭುಜವನು
ಹೊಯ್ದು ನಿಂದನು ಪಾರ್ಥನುಱೆ ಬೆಱಗಾಗೆ ಭೂತಗಣ || ೩೦

ಕಂಡಿರೇ ದೇವಿಯರೆ ನರನು
ದ್ದಂಡತನವನು ತಱಗೆಲೆಯ ಕೈ
ಕೊಂಡು ತಿಂಗಳು ನಾಲ್ಕು ಪವನಗ್ರಾಸದಲಿ ಬಳಿಕ
ದಂಡಿಸಿದನೀ ದೇಹವನು ನಾ
ವಂಡಲೆಯಲೊದಗಿದನಲೇ ನಮ
ದಂಡಿಯಲಿ ನಮ್ಮೊಡನೆಯೆಂದನು ನಗುತ ಶಶಿಮೌಳಿ || ೩೧

ಕೊಡುವೆನೀತಂಗೆನ್ನ ಶರವನು
ಮಡದಿ ಮತ್ತೆಯು ನೋಡು ಪಾರ್ಥನ
ಕಡುಹನೆನುತಿದಿರಾಗಿ ಬಾಹಪ್ಪಳಿಸಿ ಬೊಬ್ಬಿಱಿದು
ಹಿಡಿದರಿಬ್ಬರು ಕೈಗಳನು ಹೊ
ಕ್ಕೊಡನೆ ಹತ್ತಾಹತ್ತಿಯಲಿ ಮಿಗೆ
ಝಡಿತೆಯಲಿ ಚಾಳೈಸಿದರು ಬಹುವಿಧದ ಬಿನ್ನಣವ || ೩೨

ಬಿಗಿವ ಕಳಚುವ ಬಿಡಿಸಿದಾಕ್ಷಣ
ತೆಗೆವ ಕಟ್ಟುವ ಕೊಂಬ ಲಳಿಯಲಿ
ಹೊಗುವ ಹತ್ತುವ ಲವಣಿಯಲಿ ಲಾಗಿಸುವ ಹೆಱತೆಗೆವ
ಚಿಗಿವ ತೊಡಚುವ ಬಿಗಿವ ಬಿಡಿಸುವ
ಬಗಿವ ಬಳಸುವ ಬಂಧಗತಿಯಲಿ
ಲಗಡಿಸುವ ಲೋಕೈಕವೀರರು ಹೊಕ್ಕು ಹೆಣಗಿದರು || ೩೩

ಘಾಯವುಂಟೇ ತೋಱು ನಿನಗದು
ಪಾಯ ಬಿಡು ಚೊಕ್ಕೆಯವನೆನುತಲ
ಜೇಯನೊಡನಿದಿರೆದ್ದು ತಿವಿದನು ಹರನ ಹೇರುರವ
ಘಾಯಘಾತಿಗೆ ನಿಮ್ಮ ಮತವೆನು
ಗಾಯಿತೆನುತ ಪುರಾರಿ ಕಡುಪೂ
ರಾಯದಲಿ ಕರವೆತ್ತಿ ನಸು ತಿವಿದನು ಧನಂಜಯನ || ೩೪

ತರಹರಿಸಿ ನರನಿಕ್ಕಿದನು ಶಂ
ಕರನ ವಕ್ಷಸ್ಥಳವನೆಡೆಯಲಿ
ಮುರಿದು ಕಳಚಿ ಗಿರೀಶನೆಱಗಿದನಿಂದ್ರನಂದನನ
ಮರಳಿ ತಿವಿದನು ಪಾರ್ಥನೀತನ
ಶಿರಕೆ ಕೊಟ್ಟನು ಶಂಭುವಿಂತಿ
ಬ್ಬರ ವಿಷಮ ಘಾಯದ ಗಡಾವಣೆ ಘಲ್ಲಿಸಿತು ಜಗವ || ೩೫

ನಿನಗೆ ನಾ ಬೆಱಗಾದೆ ನೀನಿಂ
ದೆನಗೆ ಮೆಚ್ಚಿದೆ ದೇವದಾನವ
ಜನವೆನಗೆ ಪಾಡಲ್ಲ ನೀ ಹಲ್ಲಣಿಸಿದೈ ನಮ್ಮಾ
ಇನನೊ ಮೇಣ್ ದೇವೇಂದ್ರನೋ ಹರ
ತನಯನೋ ಹರಿಯೋ ಮಹಾದೇ
ವನೊ ಕಿರಾತನೊ ನೀನೆನುತ ಮತ್ತೆಱಗಿದನು ಶಿವನ || ೩೬

ಘಾಯವನು ಮನ್ನಿಸುತ ಶಿವ ಪೂ
ರಾಯದಲಿ ಮೆಟ್ಟಿದನು ಪಾರ್ಥನ
ಬಾಯೊಳೊಕ್ಕುದು ರಕುತ ನಾಸಿಕದೆರಡು ಬಾಹೆಯಲಿ

ನೋಯನೊಂದನು ಮೀಱಿ ಮುನಿಯುಲ
ಪಾಯುವಾದುದಕಟಕಟಾ ತ
ಪ್ಪಾಯಿತ್ತೈ ತಪಪ್ಪಾಯ್ತೆನುತ ಮಱುಗಿದನು ಮದನಾರಿ || ೩೭

ಬಿರಿದುದೀತನ ಗರ್ವಗಿರಿ ಮಡ
ಮುರಿದುದೀತನ ಶಕ್ತಿ ಸಲೆ ಟಿ
ಬ್ಬರಿಸಿತಿಂದ್ರಿಯವರ್ಗ ನೆಗ್ಗಿತು ನೆನಹಿನೊಡ್ಡವಣೆ
ಹರಿದುದಂಗಸ್ವೇದಜಲ ಕಾ
ಹುರಕೆ ಕಾಲ್ವೊಳೆಯಾಯ್ತು ಮತಿನಿ
ಬ್ಬರದ ಬೆಱಗಿನ ವೇಧೆಯಲಿ ಬೆಂಡಾದನಾ ಪಾರ್ಥ || ೩೮

ಹಂದಿತಾ ಬರಲೇಕೆ ಬನದ ಪು
ಳಿಂದನಲಿ ಸೆಣಸಾಗಲೇಕೆ ಪು
ಳಿಂದರವಮಾನಕರು ತಾವವಮಾನ್ಯರಾದೆವೆಲೆ
ಇಂದುಮೌಳಿಯುಪೇಕ್ಷೆಯೋ ತಾ
ನಿಂದು ಶಿವಪದ ಭಕ್ತಿಶೂನ್ಯನೊ
ಮಂದಪುಣ್ಯನು ತಾನಲಾ ಹಾಯೆನುತ ಚಿಂತಿಸಿದ || ೩೯

ಏಕೆ ಚಿಂತೆ ವೃಥಾ ಮನೋವ್ಯಥೆ
ಕಾಕಲಾ ತಾನಜ್ಞನಾಗೆ ಪಿ
ನಾಕಿ ಮಾಡುವುದೇನು ಮಱೆಯೊಗುವೆನು ಮಹೇಶ್ವರನ
ಈ ಕಿರಾತನ ಹರಿಬವನು ಬಳಿ
ಕೇಕನಿಮಿಷಕೆ ಗೆಲುವೆನೆಂದು ವಿ
ವೇಕಸಿರಿಯ ಕಟಾಕ್ಷವಿತ್ತಕೆ ಮಾಱಿದನು ಮನವ || ೪೦

ಮಣಲ ಲಿಂಗವ ಮಾಡಿದನು ನಿ
ರ್ಗುಣನ ಸಗುಣಾರಾಧನೆಯ ಮ
ನ್ನಣೆಗಳಲಿ ವಿಸ್ತರಿಸಿದನು ವಿವಿಧಾಗಮೋಕ್ತಿಯಲಿ
ಕಣಲಿಗೆಯ ಬಂದುಗೆಯ ಕಕ್ಕೆಯ
ಸಣಶಿರೀಷದ ಕುಸುಮದಲಿ ರಿಪು
ಗಣಭಯಂಕರನರ್ಚಿಸಿದನಂಧಾಸುರಾಂತಕನ || ೪೧

ಗೆಲಿದನೆನ್ನನು ಶಬರನೀತನ
ಗೆಲುವ ಶಕ್ತಿಯು ಕೊಡು ಕಿರಾತನ
ಬಲುಹು ಭಂಗಿಸಿತೆನ್ನ ಬಿಂಕದವೊಡೆಯ ನೀನಿರಲು
ಹಲವು ಮಾತೇನಿವನ ಮುಱಿವ
ಗ್ಗಳಿಕೆಯನು ಕೃಪೆಮಾಡೆನುತ ಪರ
ಬಲದಿಶಾಪಟ ಭುಜವನೊದಱಿಸುತಿತ್ತ ಮುಂದಾದ || ೪೨

ಕಾಣಬಹುದೋ ಶಬರ ನಿನ್ನೀ
ಪ್ರಾಣವೆನ್ನಾಧೀನವಱಿಯೋ
ಸ್ಥಾಣುವಿನ ಬಲುಹುಂಟು ಹಿಂಡುವೆನಿನ್ನು ನಿನ್ನಸುವ
ಗೋಣ ಮುಱಿವೆನು ಮಿಡುಕಿದರ ಶಿವ
ನಾಣೆ ಬಾ ಸಮ್ಮುಖಕೆ ಹಾಣಾ
ಹಾಣಿಗನುವಾಗೆನುತಲಿವೆಯಿಕ್ಕದೆ ನಿರೀಕ್ಷಿಸಿದ || ೪೩

ಕಂಡನರ್ಜುನನೀ ಕಿರಾತನ
ಮಂಡೆಯುಲಿ ತಾ ಮುಳಲಲಿಂಗದ
ಮಂಡೆಯುಲಿ ಪೂಜಿಸಿದ ನವವಿಧ ಕುಸುಮಮಂಜರಿಯು
ಕಂಡನಿತ್ತಲು ಮುಱಿದು ಪುನರಪಿ
ಕಂಡನೀ ಶಬರನಿಗಿದೆತ್ತಣ
ದಂಡಿಯೋ ತಾನೆಂದೆನುತ ಬೆಱಗಾದನಾ ಪಾರ್ಥ || ೪೪

ಆಗಲಿದನಾರೈವೆನುತವ
ನಾಗಮೋಕ್ತದಿನಮುಳ ಲಿಂಗದ
ಮೇಗಱಿಯು ನಿರ್ಮಾಲ್ಯವನು ಬೇಱಿಱಿಸಿ ಭಕ್ತಿಯಲಿ
ಪೂಗಳನು ತಱಿದೊಟ್ಟೆ ಕರುಣಾ
ಸಾಗರನ ಬಲವಂದು ದಕ್ಷನ
ಯಾಗಹರನೇ ನಮಶ್ಶಿವಾಯೆನುತಿತ್ತ ಮುಂದಾದ || ೪೫

ಮತ್ತೆ ಕಂಡನು ಖಂಡಪರುಶುವಿ
ನುತ್ತಮಾಂಗದೊಳೀಚೆಯಲಿ ಲಿಂ
ಗೋತ್ತಮಾಂಗದ ಮೇಲೆ ಕಾಣನು ಕುಸುಮ ಮಂಜರಿಯ

ತುತ್ತಿದವು ಕೌತುಕವ ರಂಜಿಸಿ
ಹೊತ್ತವಧುಭುತವನು ಭಯಾನಕ
ವೆತ್ತ ರಸದಲಿ ಮುಳುಗಿದವು ಕಂಗಳು ಧನಂಜಯನ || ೪೬

ಶಿವನಲಾ ಸಾಕ್ಷಾಚ್ಚತುರ್ದಶ
ಭುವನಕರ್ತೃವಲಾ ಕಿರಾತ
ವ್ಯವಹರಣೆಯಲಿ ಸುಳಿದನಸ್ಮದನುಗ್ರಹಾರ್ಥವಲ
ಎನಗೆ ಸಿರಶನ ವ್ರತದ ಪಿತ್ತದ
ಭವಣೆ ತಲೆಗೇಱಿದುದಲಾ ಶಿವ
ಶಿವ ಮಹಾದೇವಾಯೆನುತ ಮಱುಗಿದನು ಕಲಿಪಾರ್ಥ || ೪೭

ಹೃದಯವಿಬ್ಬಗಿಯಾಯ್ತು ಕಂಗಳು
ಬೆದಱಿದವು ವೈವರ್ಣ್ಯದಲಿ ತನು
ಗದಗದಿಸಿತಡಿಗಡಿಗೆ ಝುಡಿದುದು ರೋಮ ಪುಳಕದಲಿ
ಉದುರಿದವು ನೇತ್ರಾಂಬು ಬಿಂಕದ
ಹೆದಱಿಕೆಯು ಮೂಢತೆಯು ತಿಳುವಿನ
ಮುದದ ಖೇದದ ಘಾಯಘಾತಿಗೆ ಪಾರ್ಥನೊಳಗಾದ || ೪೮

ಸ್ವೇದಜಲದಲಿ ಮಿಂದು ಪುನರಪಿ
ಖೇದಪಂಕದೊಳದ್ದು ಬಹಳ ವಿ
ಷಾದರಜದಲಿ ಹೊರಳಿ ಭಯರಸನದಿಯನೀಸಾಡಿ
ವೈದೆಗೆದು ಮರನಾಗಿ ದೆಸೆಯಲಿ
ಬೀದಿವರಿವುತ ವಿವಿಧ ಭಾವದ
ಭೇದದಲಿ ಮನ ಮುಂದುಗೆಡುತಿದ್ದುದು ಧನಂಜಯನ || ೪೯

ಆವನನು ಜಪ ಯಜ್ಞದಲಿ ಸಂ
ಭಾವಿಸುವರಾವನ ಪದಾಂಬುಜ
ಸೇವೆಯಲಿ ಸನಕಾದಿಗಳು ಧನ್ಯಾಭಿಮಾನಿಗಳು
ಆವನೊಬ್ಬನು ನಾದ ಬಿಂದು ಕ
ಳಾವಿಶೇಷಾತೀತನೀತನೊ
ಳಾವು ಸಮರಕೆ ಸೆಣಸಿದೆವೆಲಾ ಶಿವಶಿವಾಯೆಂದ || ೫೦

ಹೂಡಿ ಜಗವನು ಜಗದ ಜೀವರ
ಕೂಡೆ ಬೆರಸಿ ಸಮಸ್ತ ವಿಷಯದೊ
ಳಾಡಿ ಸೊಗಸುವನಾವನುಪಭೋಗಪ್ರಪಂಚದಲಿ
ಹೂಡದಳಿಯದ ಗಮಿಸಿ ಮರಳದ
ಕೂಡದಗಲದ ನಿತ್ಯತೃಪ್ತನಿ
ರೂಢನೊಡನೆಚ್ಚಾಡಿದೆವಲಾ ಶಿವಶಿವಾಯೆಂದ || ೫೧

ಈ ಪರಿಯಲರ್ಜುನನ ಮನದನು
ತಾಪವನು ಕಾಣುತ್ತ ಶಾಬರ
ರೂಪರಚನೆಯ ತೆಱೆಯ ಮಱೆಯಲಿ ಮೆಱೆವ ಚಿನ್ಮಯನ
ರೂಪನವ್ಯಾಹತ ನಿಜೋನ್ನತ
ರೂಪರಸದಲಿ ನರನ ಚಿತ್ತದ
ತಾಪವಡಗಲು ತಂಪನೆಱೆದನು ತರುಣ ಶಶಿಮೌಳಿ || ೫೨

ಅರಸ ಕೇಳ್ಳೈ ನಿಮ್ಮ ಪಾರ್ಥನ
ಪರಮ ಪುಣ್ಯೋದಯವನೀಶನ
ಕರುಣವನು ಶುಕ ಸನಕ ಸಿದ್ಧಾದ್ಯರಿಗಗೋಚರದ
ನಿರುಪಮಿತ ನಿಜರೂಪವನು ವಿ
ಸ್ತರಿಸಿದನು ವಿವಿಧ ಪ್ರಭಾವೋ
ತ್ಕರದ ನಿಱುಗೆಯ ತೋಱಿದನು ಶ್ರುತಿಕೋಟಿ ಕೈಮುಗಿಯೆ || ೫೩

ಶ್ರುತಿಗಳುಪನಿಷದಾದ್ಯಖಿಳ ದೇ
ವತೆಯರಾ ಕಲ್ಪಿತ ಕಿರಾತಾ
ಕೃತಿಯನುಳಿದರು ಸುಳಿದರೀಶನ ಸುತ್ತುವಳಯದಲಿ
ಸ್ಮಿತ ಮಧುರ ಮುಖಕಾಂತಿ ಕಲ್ಲೋ
ಲಿತ ಕಟಾಕ್ಷಚ್ಛವಿಯಲೀಶನ
ಧೃತಿಯಲೀಡಿಱಿದೆಡದಲೆಸೆದರು ಗೌರಿದೇವಿಯರು || ೫೪

ಜಯ ಜಯೆಂದುದು ನಿಖಿಳಜಗವ
ಕ್ಷಯನ ದರುಶನಕೆಂದು ಶ್ರುತಿಕೋ
ಟಿಯ ಗಡಾವಣೆ ಘಾಸಿಯಾದುದು ಹರನ ಫಲ್ಲಣೆಗೆ

ನಿಯುತವೇನೋ ಜನ್ಮಶತ ಸಂ
ಚಯದಲರರೆ ಕೃತಾರ್ಥನು ಧನಂ
ಜಯನೆನುತ ಮೊಳಗಿದವು ದುಂದುಭಿಯಮರಕಟಕದಲಿ ॥ ೫೫

ಹರಹಿನಲಿ ಹೊದಱಿದ್ದು ಹರುಷದ
ಹೊರಳಿಯಲಿ ಹೊಡಕರಿಸಿ ಚಿತ್ತವ
ತಿರುಹಿ ಹಿಡಿದನು ಮನಕೆ ಬುದ್ಧಿಯ ಹಮ್ಮು ಹಮ್ಮುಗೆಯ
ಕೊರಳುಗೊಳಿಸಿ ಕುಲಾಲಚಕ್ರದ
ಪರಿಭವಣಿಗೆಯ ಪಾಡಿನಲಿ ಕಾ
ತರಿಸುತವನಿಗೆ ಮೈಯ್ಯ ಕೊಟ್ಟನು ನೀಡಿ ಕರಯುಗವ ॥ ೫೬

ಅಱಿದಱಿದು ಮತಿಗೆಟ್ಟು ಮಾನವ
ಗುಱಿಯಲಾ ವಿಗೆ ಕಂಡು ಕಂಡೆ
ಚ್ಚರದ ಝೂಳನಲಾ ವಿವೇಕದ ಮೂಗುವಾರಿಯಲಿ
ಬಱಿಮನದ ಬಾಹಿರನೊಳಿನ್ನಲಿ
ಮಱೆವುದಪರಾಧವನು ನಿನ್ನನೆ
ಮೆಱೆವುದೈಕಾರುಣ್ಯಸಿಧಿ ಕೈಗಾಯಬೇಕೆಂದ ॥ ೫೭

ಹರನೆ ಗಂಗಾಧರನೆ ಗಿರಿಜಾ
ವರನೆ ಶಶಿಶೇಖರನೆ ದಕ್ಷಾ
ಧ್ವರಹರನೆ ಶಂಕರನೆ ನಿಜಭಕ್ತರ ಮನೋಹರನೆ
ಕರುಣಿಸುವುದುದ್ಧರಿಸುವುದು ಸಂ
ಹರಿಸುವುದು ಪರಿಭವವನೆಂದುರು
ತರದ ಭಕ್ತಿಯಲಂದು ಸೈಗೆಡೆದಿರ್ದನಾ ಪಾರ್ಥ ॥ ೫೮

ಧರಣಿಪತಿ ಕೇಳೀಶನೀತನ
ಹೊರೆಗೆ ಬಿಜಯಂಗೈದು ಪಾರ್ಥನ
ಶಿರವ ಹಿಡಿದೆತ್ತಿದನು ಬಿಗಿಯಪ್ಪಿದನು ಬರಸೆಳೆದು
ಮರುಳು ಮಗನೆ ಮಹಾತಪಸ್ಸಂ
ಚರಣೆಯಲಿ ನೊಂದೈಯೆನುತ ಕಡು
ಗರುಣಿ ಕರುಣಾಮೃತಸಮುದ್ರದೊಳದ್ದಿದನು ನರನ ॥ ೫೯

ಕೂಡೆ ವೈದಡವಿದನು ಚೈವುಂ
ಡಾಡಿದನು ಮನಸೋಯದಿರು ನೀ
ಮಾಡಿದುಪಹತಿಯೆಂಬುದೆಮ್ಮರ್ಚನೆ ನಮಸ್ಕಾರ
ಕೋಡದಿರು ಕೊಂಕದಿರು ಭಕ್ತಿಗೆ
ನಾಡೆ ಮೆಚ್ಚಿದೆನೆನ್ನ ಚಿತ್ತಕೆ
ಖೋಡಿಯಿಲ್ಲೆಲೆ ಮಗನೆಯೀ ಗುಹಗಣಪರಾಣೆಂದ || ೬೦

ನರನು ನೀ ಪೂರ್ವದಲಿ ಪೀತಾಂ
ಬರನ ವಿಮಳಾಂಶಪ್ರಭೂತನು
ಪರಮಋಷಿ ನೀನೆನ್ನ ಭಕ್ತನು ಚಿಂತೆಬೇಡಿದಕೆ
ವರದನಾದೆನು ಮಗನೆ ಶಸ್ತ್ರೀ
ತ್ಕರವನಿದನೀ ಮುನ್ನ ಕೊಳ್ಳೆಂ
ದುರತರ ಪ್ರೇಮದಲಿ ಕೊಟ್ಟನು ಖಡ್ಗ ಶರ ಧನುವ || ೬೧

ಸಲಿಸುವೆನು ನೀ ಬೇಡಿದುದನ
ಸ್ಖಲಿತವಂಜದಿರಿನ್ನು ಸಾಕೆನೆ
ಸುಲಭ ನೀ ಭಕ್ತರಿಗೆ ಭಯವೇಕಿನ್ನು ತನಗೆನುತ
ಸಲಿಸು ಪಾಶುಪತಾಸ್ತ್ರವನು ವೆ
ಗ್ಗಳೆಯ ಬ್ರಹ್ಮಶಿರೋಸ್ತ್ರವನು ಕೈ
ಗೊಳಿಸುವುದು ಕೃಪೆಯುಳ್ಳಡೆಂದನು ನಗುತ ಕಲಿಪಾರ್ಥ || ೬೨

ಸವಡಿ ನುಡಿಯುಂಟೇ ಚತುರ್ದಶ
ಭುವನದಾಹವದಕ್ಷವೀ ಬಾ
ಣವನು ಕೊಟ್ಟೆನು ಮಗನೆ ಬ್ರಹ್ಮಶಿರೋಮಹಾಶರವ
ದಿವಿಜ ದನುಜ ಭುಜಂಗಮಾದಿಗ
ಳವಗಡಿಸಲುಜ್ಜಿ ಹೆಚ್ಚುವುದು ಸಂ
ಭವಿಸಿದಾಹುತಿಯೆಂದು ಶರವುದ್ದಂಡ ಬಲನೆಂದ || ೬೩

ಸರಸಿಯಲಿ ಮಿಂದಾಚಮನ ವಿ
ಸ್ತರಣವೆಲ್ಲವ ಮಾಡಿ ಶೂಲಿಯ
ಚರಣದಲಿ ಮೆಯ್ಯಿಕ್ಕಿ ನಿಂದನು ಬಾಗಿ ಕೈಮುಗಿದು

ಸರಳ ಸಾಂಗೋಪಾಂಗ ಮಂತ್ರೋ
ಚ್ಚರಣ ಸಂಹೃತಿ ಮೋಕ್ಷವನು ವಿ
ಸ್ತರಿಸಿ ಸರಹಸ್ಯದಲಿ ಕೊಟ್ಟನು ಪಾಶುಪತಶರವ || ೬೪

ಧರೆಗೆಸೆವ ಧರ್ಮಾರ್ಥ ಕಾಮೋ
ತ್ಕರವನನುಪಮ ಮೋಕ್ಷಪದವನು
ಧುರದಲಹಿತರ ಗೆಲುವ ಶೌರ್ಯೋನ್ನತಿಯ ಸಾಹಸವ
ಕರುಣಿಸಿದನಪ್ಪಿದನು ಕರೆದನು
ಗಿರಿತನುಜೆ ನೀನುದ್ಧರಿಪುದೀ
ಪರಮಭಕ್ತನನೆನಲು ಕರುಣದೊಳೀಕ್ಷಿಸಿದಳಗಜೆ || ೬೫

ಗಿರಿಜೆ ತ್ರಿಜಗನ್ಮಾತೆ ರಕ್ಷಿಸು
ಪರಮ ಕರುಣಾಮೂರ್ತಿ ಜಗದೊಳು
ಸಿರಿ ಸರಸ್ವತಿ ಚಂಡಿ ದುರ್ಗಿಯರೆಂಬ ನಾಮದಲಿ
ಚರಿಸುತಿಹ ನಿನ್ನೇಕಶಕ್ತಿಯ
ಪರಿಯನರಿವವರಾರೆನುತ ತ
ಚ್ಚರಣಕಮಲಕ್ಕೆರಗಿ ಪುಳುಕಿತನಾದನಾ ಪಾರ್ಥ || ೬೬

ಕಂಜನಾಭನ ಮೈದುನನೆ ಬಾ
ರಂಜದಿರು ನಿನಗಾಂತ ರಿಪುಗಳ
ಭಂಜಿಸುವ ಸಾಮರ್ಥ್ಯದನುವನು ಮೆರೆದು ರಂಜಿಸುವ
ಅಂಜನಾಸ್ತ್ರವನಿತ್ತೆ ಮಗನೆ ಧ
ನಂಜಯನೆ ನಿನಗೆಂದು ಕರುಣದಿ
ಮಂಜುಳಾರವದಿಂದ ತಚ್ಛಸ್ತ್ರವನು ಬೆಸಸಿದಳು || ೬೭

ಕರಿಮುಖನ ಷಣ್ಮುಖನ ಚರಣ
ಕ್ಕೆರಗಿ ನುತಿಸುತ್ತಿರಲು ಪಾರ್ಥನ
ಪರಮ ಭಕ್ತಿಗೆ ಮೆಚ್ಚಿ ತೆಗೆದಪ್ಪಿದರು ಹರುಷದಲಿ
ವರಮಹಾಸ್ತ್ರಂಗಳನು ಮಂತ್ರೋ
ತ್ಕರವನವರೊಲಿದಿತ್ತು ಗೆಲು ನೀ
ಧುರದೊಳಹಿತರನೆಂದು ಹರಸಿದರಾ ಧನಂಜಯನ || ೬೮

ನಿಮ್ಮ ಕಥೆ ವೇದೋಕ್ತವಾಗಲಿ
ನಿಮ್ಮ ಚರಿತ ಸುಚರಿತವಾಗಲಿ
ನಿಮ್ಮ ಕಥಾಸಾಮೃತವನಾಲಿಸಿ ಕೇಳ್ದರಘ ಕೆಡಲಿ
ನಿಮ್ಮ ನಿಂದಿಸಿದವರುಗಳು ದು
ಷ್ಕರ್ಮಿಗಳು ಪಾತಕರು ತಾನಿದು
ನಮ್ಮ ಮತವೆಂದಭವ ಹರಸಿದನಾ ಧನಂಜಯನ || ೬೯

ಹರನ ಕೋಮಲಪಾಣಿಕಮಲ
ಸ್ಪರುಶಪೀಯೂಷದಲಿ ಮುಳುಗಿದ
ನರನ ತನು ನಿರ್ಮುಕ್ತಮುಕ್ತ ಭುಜಂಗನಂದದಲಿ
ಕಿರಣಲಹರಿಯುಲಳಿಯು ದಿವ್ಯೋ
ತ್ಕರವ ಚಪಳಚ್ಛವಿಯು ಚಾರು
ಸ್ಫುರಣದಲಿ ಬೋಳೈಸಿದುದು ಸುರ ನರರ ಕಣ್ಮನವ || ೭೦

ಸರಳ ಸಾಂಗೋಪಾಂಗವನು ನಿನ
ಗಱುಹಿದೆನು ನೀನಿನ್ನು ಶಕ್ರನ
ಪುರಿಗೆ ನಡೆ ನಿಮ್ಮುತ್ತರೋತ್ತರ ಕಾರ್ಯಗತಿಗಳಿಗೆ
ಹರಿ ಸಹಾಯನು ನಮ್ಮ ಸತ್ವದ
ಪರಮ ರೂಪಾತ್ಮಕ ಕಣಾ ನೀ
ನಱಿದಿರೆಂದು ಮಹೇಶ ಬೀಳ್ಕೊಟ್ಟನು ಧನಂಜಯನ || ೭೧

ದೇವಿಯರು ಗುಹ ಗಣಪ ಮುಖ್ಯಗ
ಣಾವಳಿಗೆ ಪೊಡಮಟ್ಟನವರ ಕೃ
ಪಾವಲೋಕನದಿಂದ ಪೊಂಪುಳಿಯೋದನಡಿಗಡಿಗೆ
ದೇವ ಬಿಜಯಂಗೈದು ರಜತ
ಗ್ರಾವಶಿಖರವನಡರೆ ಮನದೊಳು
ಭಾವಿಸಿದನಾ ವೀರನಾರಾಯಣನ ಮೈದುನನು || ೭೨

## ೬. ಸುಮನೋಹರ ಭಯಂಕರವಾಯ್ತು

ಕೇಳು ಜನಮೇಜಯ ಧರಿತ್ರೀ
ಪಾಲ ವರಕ್ಕೈಲಾಸವಾಸಿಯ
ಬೀಳುಕೊಂಡನು ತದ್ವಿಯೋಗದೊಳಿಂದ್ರಕೀಲದಲಿ
ಮೇಲುದುಗುಡದಿನಸ್ತ್ರಲಾಭವ
ನಾಲಿಸದೆ ಶಂಕರ ಪದಾಂಬುಜ
ದೋಲಗದ ಸಿರಿ ತಪ್ಪಿತೆಂದುಮ್ಮಳಿಸಿದನು ಪಾರ್ಥ || ೧

ಮರುಳ ದೇವಾರ್ಚನೆಯೊ ಕನಸಿನ
ಸಿರಿಯೋ ಶಿಶುವಿನಕ್ಕೈಯ್ಯ ರತ್ನವೊ
ಹರಿಯ ಹೂಮಾಲೆಯೊ ಮದೀಯ ವಿವೇಕವಿಭ್ರಮವೊ
ಹರನಸೀ ಚರ್ಮಾಕ್ಷಿಯಲಿ ಗೋ
ಚರಿಸಿ ಬೇಡಿದುದಂಬು ಮರ್ತ್ಯದೊ
ಳಿರವು ಮರ್ಳು ಭಾಪೆನ್ನ ಪುಣ್ಯವೆನುತ್ತ ಚಿಂತಿಸಿದ || ೨

ಅರಸ ಕೇಳೈ ಹತ್ತುಸಾವಿರ
ತುರಗನಿಕರದ ಲಳಿಯ ದಿವ್ಯಾಂ
ಬರದ ಸಿಂಧದ ಸಾಲಸತ್ತಿಗೆಗಳ ಪತಾಕೆಗಳ
ಖರರುಚಿಯ ಮಾಣಿಕ್ಯಾಂಕವೋ ಸುರ
ಗಿರಿಯ ಸೋದರವೋ ಮೃಗಾಂಕನ
ಮಱುದಲಿಯೋ ತಾನೆನಲು ರಥ ಹೊಳೆದಿಳಿದುದಂಬರವ || ೩

ಏನಿದಚ್ಚರಿ ಮೇಲೆ ಮೇಲೆ ನ
ವೀನ ದರುಶನವೆನ್ನ ಪುಣ್ಯವ
ನೂನವೈಸಲೆಯೆನುತ ನರನಿದಿರ್ಗೊಂಡನಾ ರಥವ
ನೀನೆಯಹೆಯ್ಯೆ ಪಾರ್ಥನೆಂಬ ಮ
ಹಾ ನರೇಶ್ವರನೆನುತ ಮಿಗೆ ಸ
ನ್ಮಾನಿಸುತ ಸುರಪತಿಯ ಸಾರಥಿ ನಿಲಿಸಿದನು ರಥವ || ೪

ಏಳು ಫಲುಗುಣ ಹರಿವರೂಥದ
ಮೇಲೆ ಬಿಜಯಂಗೈವ ಬಹಳ ಫ
ಲಾಳಿಯಿದೆಲಾ ನಿನ್ನ ಪುಣ್ಯದ್ರುಮದ ಬೇರೊಡೆದು
ಸಾಲಕುಱಿದಱಿಹಿಗಳ ಕರ್ಮದ
ಕೂಲಿಗರ ಜಡಜಂಜಪೂಗರ
ಜಾಲ ಸಿರಿಯುನಿಮಿಷರ ಪುರ ವಶವಾಯ್ತು ನಿನಗೆಂದ || ೫

ಬಲ್ಲರಾರದನಶ್ವಮೇಧದ
ಮಲ್ಲರನು ಕೃತರಾಜಸೂಯರು
ಬಲ್ಲರೇ ಕಡೆವೀಡ ಕೋಟಿಯ ಗುಡಿಯ ಸೂಳೆಯರ
ಎಲ್ಲಿಯುಮರಾವತಿ ನರಾಧಮ
ರೆಲ್ಲಿ ನಾವೀಶ್ವರನ ಕರುಣದ
ಭುಲ್ಲವಣೆಯುಲಿ ಭಾಗ್ಯರೈಸಲೆಯೆಂದನಾ ಪಾರ್ಥ || ೬

ಎನುತ ತೇರಿನೊಳೊಂದು ಕಾಲಿ
ಟ್ಟನು ಧನಂಜಯನಿಂದ್ರಕೀಲದ
ಬನಕೆ ಕೈಮುಗಿದೆಱಗಿದನು ನುಡಿದನು ಮಧುರವಚನದಲಿ
ಮುನಿಜನವೆ ಪರ್ವತವೆ ಪಂಕಜ
ವನವೆ ತರುಲತೆ ಗುಲ್ಮ ಖಗ ಮೃಗ
ವನಚರವೆ ನಾ ಹೋಗಿ ಬಹೆನೇ ನಿಮ್ಮನುಜ್ಞೆಯಲಿ || ೭

ಎಂದು ರಥವೇಱಿದನು ಪಾರ್ಥ ಪು
ರಂದರನ ಸಾರಥಿ ಗುಣೌಘವ
ನೊಂದು ನಾಲಿಗೆಯಿಂದ ಹೊಗಳಿದನಾ ಧನಂಜಯನ
ಗೊಂದಣದ ವಾಘೆಗಳನೆಲ್ಲವ
ನೊಂದುಗೂಡಿ ಕಿರೀಟಿ ದೃಢವಾ
ಗೆಂದು ಮಾತಳಿ ಚಪ್ಪರಿಸಿದನು ಚಪಲವಾಜಿಗಳ || ೮

ಆವ ಜವವೇನೆಂಬ ಗತಿ ಮೋ
ಹಾವ ದೃಢವೇಗಾಯ್ಲತನ ತಾ
ನಾವ ಸೂಟಿಯುದಾರು ಬಲ್ಲರು ವಹಿಲ ವಿವರಣವ

ತೀವಿತಾಕಾಶವನು ಹೇಷಾ
ರಾವವೀತನ ಹುಂಕೃತಧ್ವನಿ
ಯೀ ವಿಗಡರಥಚಕ್ರ ಚೀತ್ಕೃತಿ ಚಪಳನಿರ್ಘೋಷ || ೯

ಅವನಿಪತಿ ಕೇಳಿಂದ್ರಸಾರಥಿ
ವಿವರಿಸಿದನರ್ಜುನಗೆ ಭೂರಿಯ
ಭುವನಕೋಶದ ಸನ್ನಿವೇಶವನದ್ರಿ ಜಲಧಿಗಳ
ಇವು ಕುಲಾದ್ರಿಗಳಿವು ಪಯೋಧಿಗ
ಳಿವು ಮಹಾದ್ವೀಪಂಗಳಿವು ಮಾ
ನವರ ಧರಣಿ ಸ್ವರ್ಗವಿಲ್ಲಿಂದಿತ್ತ ನೋಡೆಂದ || ೧೦

ಹೊಳೆವುತದೆ ದೂರದಲಿ ರಜತಾ
ಚಲವ ಕಡೆದಂದದಲಿ ಕೆಲದಲಿ
ಬಲವಿರೋಧಿಯ ಪಟ್ಟದಾನೆ ಸುರೇಂದ್ರನಂದನನೆ
ನಿಳಯವದೆ ನಸುದೂರದಲಿ ಥಳ
ಥಳಿಸುವಮಲ ಮಣಿಪ್ರಭಾ ಪರಿ
ವಳಯ ರಶ್ಮಿನಿಬದ್ಧವಮರಾವತಿಯ ನೋಡೆಂದ || ೧೧

ಹೊಕ್ಕನಮರಾವತಿಯನರ್ಜುನ
ನೆಕ್ಕತುಳದಲುಪಾರ್ಜಿಸಿದ ಪು
ಣ್ಯಕ್ಕೆ ಸರಿಯೇ ನಹುಷ ನಳ ಭರತಾದಿ ಭೂಮಿಪರು
ಉಕ್ಕಿದವು ಪರಿಮಳದ ತೇಜದ
ತೆಕ್ಕೆಗಳು ಲಾವಣ್ಯಲಹರಿಯ
ಸೊಕ್ಕುಗಳ ಸುರಸೂಳೆಗೇರಿಗಳೊಳಗೆ ಬರುತಿರ್ದ || ೧೨

ಇಳಿದು ರಥವನು ದಿವಿಜರಾಯನ
ನಿಳಯವನು ಹೊಕ್ಕನು ಕಿರೀಟಿಯ
ನಳವಿಯಲಿ ಕಂಡಿದಿರುವಂದನು ನಗುತ ಶತಮನ್ಯು
ಸೆಳೆದು ಬಿಗಿಯಪ್ಪಿದನು ಕರದಲಿ
ತಳುಕಿ ಕರವನು ತಂದು ತನ್ನಯ
ಕೆಲದೊಳಗೆ ಕುಳ್ಳಿರಿಸಿದನು ಸಿಂಹಾಸನಾರ್ಧದಲಿ || ೧೩

ನೂಱು ಪಶುಗೆಡಹಿಗೆ ಸುರೇಂದ್ರನು
ಮೂಱುವನು ಗದ್ದುಗೆಯ ಬಱಿದೇ
ಸೂಱೆಗೊಂಡನು ಸುರಪತಿಯ ಸಿಂಹಾಸನದ ಸಿರಿಯ
ಮೂಱು ಯುಗದರಸುಗಳೊಳೀತಗೆ
ತೋಱಲೆಣೆಯಿಲ್ಲರಸ ಶಕ್ರನ
ನೂಱುಮಡಿ ತೇಜದಲಿ ತೊಳತೊಳಗಿದನು ಕಲಿಪಾರ್ಥ || ೧೪

ಋಷಿಗಳವದಿರು ಮರ್ತ್ಯರೆಂಬವ
ರೊಸಗೆಯಮರಾವತಿಯೊಳೇಸಿದು
ಹೊಸತಲಾ ಬಂದಾತನಾರೋ ಪೂತು ಮಝುಯೆನುತ
ವಸುಗಳಾದಿತ್ಯರು ಭುಜಂಗಮ
ರಸುರ ಗಂಧರ್ವಾದಿ ದೇವ
ಪ್ರಸರ ಬಂದುದು ಕಾಣಿಕೆಗೆ ಪುರುಹೂತನಂದನನ || ೧೫

ಅಂದಿನುತ್ಸವವಮರನಿಕರದ
ಸಂದಣಿಯನೇನೆಂಬೆ ಶಕ್ರನ
ಮಂದಿರದೊಳೊತ್ತೊತ್ತೆ ಜಡಿದುದು ಝಳದ ಝಾಡಿಯಲಿ
ಮಂದಿ ತೊಲಗಲಿ ತೆರಹ ಕೊಡಿಸಾ
ನಿಂದವರ ಹೊಯ್ಯ್ ಗಜ ಬಜವ ಮಾ
ಣೆಂದು ಘರ್ಜಿಸಿತಿಂದ್ರನಾಸ್ಥಾನದಲಿ ಸುರನಿಕರ || ೧೬

ತೊಲಗಿಸಾ ಮಂದಿಯನು ತೆಗೆ ಬಾ
ಗಿಲನೆನಲು ಕವಿದುದು ಸುರೇಂದ್ರನ
ಲಲನೆಯರು ಲಾವಣ್ಯಲಹರಿಯ ಲಲಿತ ವಿಭ್ರಮದ
ಸುಳಿಗುರುಳ ನಿಟ್ಟೆಸಳುಗಂಗಳ
ಹೊಳೆವ ಕದಪಿನ ನುಣ್ಗೊರಳ ಬಲು
ಮೊಲೆಯ ಮೋಹರ ನೂಕಿತಮರೀ ವಾರನಾರಿಯರ || ೧೭

ಉಗಿವರೋ ಕತ್ತುರಿಯ ತವಲಾ
ಯಿಗಳ ಮುಚ್ಚುಳನೆನೆ ಕವಾಟವ
ತೆಗೆಯೆ ಕವಿದುದು ದಿವ್ಯಪರಿಮಳಪೂರ ಪೂರವಿಸೆ

ಹೊಗರಲಗು ಹೊಳಹುಗಳ ಕಡೆಗ
ಣ್ಣುಗಳ ಬಲುಗರುವಾಯ ಮುಸಕಿನ
ಬಿಗುಹುಗಳ ಬಿರುದಂಕಕಾತಿಯರಿಂದ್ರನೋಲಗದ || ೧೮

ನೇವುರದ ಸುಣ್ಣನಿಯ ಕಾಂಚಿಯ
ಕೇವಣದ ಕಿಂಕಿಣಿಯ ರಭಸದ
ನೇವಣಿಗಳೊಲಹುಗಳ ಮೌಳಿಯ ಮುಖದ ಮುಸುಕುಗಳ
ಭಾವದುಬ್ಬಿನ ಚೆಲ್ಲಿಗಂಗಳ
ಡಾವರದ ಡೊಳ್ಳಾಸಕಾತಿಯ
ರಾ ವಿಬುಧಪತಿಯೋಲಗವ ಹೊಕ್ಕರು ಸವಾಯಿಯಲಿ || ೧೯

ಏನನೆಂಬೆನು ಜೀಯ ಶಕ್ರ
ಸ್ಥಾನವಲ್ಲಾ ದಿವ್ಯವಾದ್ಯ ಸು
ಗಾನ ನರ್ತನ ವಿಮಳ ತೂರ್ಯತ್ರಯದ ಮೇಳವದ
ಆ ನಿತಂಬಿನಿಯರ ಸುರೇಖಾ
ಸ್ಥಾನಕದ ನಿಜಗೆಯ ಸುಧಾಳದ
ನೂನ ಸಮ್ಮೋಹನದ ತೂಕದ ಭಾವ ಭಂಗಿಗಳ || ೨೦

ರಸದ ಸಂಸ್ಥಾಪನೆಯ ಭಾವದ
ಬೆಸುಗೆಗಳ ಹಸ್ತಾಭಿನಯ ದೃ
ಕ್ಪ್ರಸರಣದ ಗತಿ ಸಾತ್ವಿಕಾಂಗಿಕ ಸುಗತಿ ವಿಭ್ರಮದ
ವಿಷಮ ಸಮಕರಣದ ಕಳಾಪದ
ಕುಸುರಿಗಳ ವರಲಾಸ್ಯ ತಾಂಡವ
ವೆಸೆದುದೈ ರಂಭಾದಿ ನರ್ತಕಿಯರಲಿ ಹೊಸತೆಸಿಸಿ || ೨೧

ಗಾನರಸದಲಿ ಮುಳುಗಿತಮರಾ
ಸ್ಥಾನವೆತ್ತಣ ವಾದ್ಯ ನರ್ತನ
ವೇನೆನಲು ಘನವಾದ್ಯಗತಿ ಸಮ್ಮೋಹಿಸಿತು ಸಭೆಯ
ಗಾನವಾದ್ಯವದೆತ್ತ ನೃತ್ಯರ
ಸಾನುಭವ ಭಾರವಿಸಿತನ್ಯೋ
ನ್ಯಾನುರಂಜಕವಾಯ್ತು ತೂರ್ಯತ್ರಯದ ಮೇಳಾಪ || ೨೨

ಈ ಯಮಾನುಷ ನೃತ್ಯವಾದ್ಯ ಸು
ಗೇಯರಸದಲಿ ಮುಳುಗಿ ಕರಣದ
ಲಾಯ ತೊಡಕದೆ ಪಾರ್ಥನಿದ್ದನು ಧೈರ್ಯಶಿಖರಿಯಲಿ
ಈ ಯುವತಿ ತಾನಾವಳೋ ಕುಸು
ಮಾಯುಧನ ಖಂಡೆಯವಲಾ ಮಝು
ಮಾಯೆಯೆನುತೂರ್ವಶಿಯನೆವೆಯಿಕ್ಕದೆ ನಿರೀಕ್ಷಿಸಿದ || ೨೩

ಪಾರುಖಾಣೆಯವಿತ್ತನಾ ಜಂ
ಭಾರಿಯೂರ್ವಶಿ ರಂಭೆ ಮೇನಕೆ
ಗೌರಿ ಮೊದಲಾದಖಿಳ ಪಾತ್ರಕೆ ಸಾನುರಾಗದಲಿ
ನಾರಿಯರು ಸಿಖಿಳಾಮರರು ಬೀ
ಡಾರಕೈದಿತು ಹರೆದುದೋಲಗ
ವಾರತಿಯ ಹರಿವಾಣ ಸುಳಿದುದು ಸಾಲುಸೊಡರುಗಳ || ೨೪

ಅರಸ ಕೇಳಾರೋಗಿಸಿದರಿ
ಬ್ಬರು ಸವೋಳದಲಿದ್ದು ಬೇಱೊಂ
ದರಮನೆಗೆ ಕಳುಹಿದನು ಪವಡಿಸುವೊಡೆ ನಿಜಾತ್ಮಜನ
ಸುರಪನಿತ್ತಲು ಚಿತ್ರಸೇನನ
ಕರೆಸಿದನು ಫಲುಗುಣನ ಭಾವವ
ನಱಿಹಿದನು ನಮ್ಮೂರ್ವಶಿಯ ಕಳುಹೆಂದು ನೇಮಿಸಿದ || ೨೫

ಇನಿಬರಿದೆ ರಂಭಾದಿ ಸೀಮಂ
ತಿನಿಯರೊಳಗೂರ್ವಶಿಯೊಳಾದುದು
ಮನ ಧನಂಜಯನೀಕ್ಷಿಸಿದನನಿಮೇಷ ದೃಷ್ಟಿಯಲಿ
ವನಿತೆಯನು ಕಳುಹೇಳು ನೀನೆಂ
ದೆನೆ ಹಸಾದವ ಹಾಯ್ಕಿ ದೇವಾಂ
ಗನೆಯ ನಿಳಯಕೆ ಬಂದನೀತನು ಹರಿಯ ನೇಮದಲಿ || ೨೬

ತಾಯೆ ಚಿತ್ತೈಸರಮನೆಯ ಸೂ
ಳಾಯತನು ಬಂದೈದನೆನೆ ಕಮ
ಳಾಯತಾಂಬಕಿ ಚಿತ್ರಸೇನನ ಕರೆಸಿದಳು ಬಳಿಕ

ತಾಯೆನುತ ವಸ್ತ್ರಾಭರಣದ ಪ
ಸಾಯವಿತ್ತಳು ಪರಿಮಳದ ತವ
ಲಾಯಿಗಳ ನೂಕಿದಳು ವರಕತ್ತುರಿಯ ಕಪ್ಪುರದ ॥ ೨೭

ಅಣಕವಲ್ಲಿದು ರಾಯನಟ್ಟಿದ
ಮಣಿಹವೋ ನಿಜಕಾರ್ಯಗತಿಗಳ
ಕುಣಿಕೆಯೋ ಕರ್ತವ್ಯವಾವುದು ನಿಮಗೆ ನಮ್ಮಲ್ಲಿ
ಗುಣಭರಿತ ಹೇಳೆನೆ ಮುಗುಳ್ನಗೆ
ಕುಣಿಯೆ ಮುಖದಲಿ ಮಾನಿನಿಗೆ ಮೆಂ
ಠಣಿಸಿ ಲಜ್ಜಾಭರದಿ ನುಡಿದನು ದೂತನೀ ಮಾತ ॥ ೨೮

ಎಮಗೆ ಮಗನರ್ಜುನನು ನೀನಿಂ
ದೆಮಗೆ ಸೊಸೆಯಹುದಾತನಂತ
ಸ್ತಿಮಿರವನು ತೊಳೆ ನಿನ್ನ ಕುಚಯುಗಕಾಂತಿಲಹರಿಯಲಿ
ಕಮಲಮುಖಿ ನೀ ಕಮಲವಾತನು
ಭ್ರಮರ ನೀ ಸುರವನದ ಸಿರಿಮಧು
ಸಮಯವರ್ಜುನನೆಂದು ಬೆಸಸಿದನಮರಪತಿಯೆಂದ ॥ ೨೯

ಕೇಳುತಿರೆ ರೋಮಾಂಚ ಲಜ್ಜೆಯ
ಜೋಳಿಯೆದ್ದುದು ಝೋಂಪಿಸಿತು ಪುಳ
ಕಾಳಿ ಭಯವನು ಮರಿಸಿದುದನುರಾಗದಭಿಮಾನ
ಮೇಲೆ ಮೇಲಭಿಲಾಷೆ ಧೈರ್ಯವ
ಚಾಳವಿಸೆ ಪರಿತೋಷ ಪೂರಣ
ದೇಳುಮುಳುಗಾಯ್ತುತ್ತರಕೆ ನಸುಬಾಗಿದಳು ಶಿರವ ॥ ೩೦

ಆತನುತ್ತಮ ನಾಯಕನು ವಿ
ಖ್ಯಾತೆ ನೀ ಸುರಲೋಕದಲಿ ಲ
ಜ್ಜಾತಿಶಯನೇಕಿಲ್ಲಿ ನಾವೇ ನಿಮ್ಮ ಪರಿವಾರ
ಸೋತಡೆಯು ದಿಟ ಭಂಗವಲ್ಲ ಪು
ರಾತನದ ನಳ ನಹುಷ ಭರತ ಯ
ಯಾತಿ ನೃಪರೊಳಗೀತನಗ್ಗಳನಬಲೆ ಕೇಳೆಂದ ॥ ೩೧

ರಾಯನಟ್ಟಿದ ನೇಮುಗಡ ಕಮ
ನೀಯವಲ್ಲಾ ನಿನ್ನ ನುಡಿ ರಮ
ಣೀಯಕರವದು ನಿನ್ನ ರಚನೆ ಮಹಾನುಭಾವವಲೆ
ಆಯಿತಿದು ನೀ ಹೋಗೆನುತ್ತಬು
ಜಾಯತಾಕ್ಷಿ ಮಹೋತ್ಸವದಿ ನಾ
ರಾಯಣನ ಮೈದುನನ ಬರೆದಳು ಚಿತ್ತಭಿತ್ತಿಯಲಿ ॥ ೩೨

ವನಜಲೋಚನೆ ಮಾಡಿದಳು ಮ
ಜ್ಜನವನಮಳದುಕೂಲಪರಿಮಂ
ಡನದಲೆಸೆದಳು ವಿವಿಧ ರತ್ನಾಭರಣಶೋಭೆಯಲಿ
ತನತನಗೆ ಭರಣಿಗಳಲನುಲೇ
ಪನವ ತಂದರು ವಿಲಸದಧಿವಾ
ಸನೆಯ ಕುಸುಮದ ಮೊಗ್ಗೆಯಲಿ ರಚಿಸಿದರು ಸಿರಿಮುಡಿಯ ॥ ೩೩

ಜನಮನದ ಸಂಕಲೆವನೆಯೊ ಲೋ
ಚನಮೃಗದ ತಡೆವೇಂಟೆಕಾತಿಯೊ
ಮನುಮಥನ ಸಂಜೀವನೌಷಧವೋ ಮಹಾದೇವ
ಮನಸಿಜನ ಮಾರಾಂಕ ಕಾಮುಕ
ಜನದ ಜೀವಾರ್ಥಕ್ಕೆ ವಿಭುವೆಂ
ದೆನಿಸಿ ವೂರ್ವಶಿ ಬಂದಳರ್ಜುನದೇವನಿದ್ದೆಡೆಗೆ ॥ ೩೪

ಬಂದಳೂರ್ವಶಿ ಬಳ್ಳಿಮಿಂಚಿನ
ಮಂದೆಯಲಿ ಮುಱಿದಿಳಿವ ಮಱಿಮುಗಿ
ಲಿಂದುವೊಲು ದಂಡಿಗೆಯನಿಳಿದಳು ರಾಜಭವನದಲಿ
ಮುಂದೆ ಪಾಯವಧಾರು ಸತಿಯರ
ಸಂದಣಿಯ ಶಿಂಜಾರವದ ಸೊಗ
ಸಿಂದ ಶಬ್ದಬ್ರಹ್ಮ ಸೋತುದು ಸೊರಹಲೇನೆಂದ ॥ ೩೫

ಬಾಗಿಲಲಿ ಬಾಗಿಲಲಿ ನಿಂದರು
ಸೋಗೆಗಣ್ಣಬಲೆಯರು ಸೆಜ್ಜೆಯ
ಬಾಗಿಲಲಿ ಚಾಮರದ ಹಡಪದ ಚಪಳೆಯರುಸಹಿತ

ಆ ಗರುವೆ ಹೊಕ್ಕಳು ಮಹಾಹಿಯ
ಭೋಗತಲ್ಪದ ಹರಿಯೊಲಿಹ ಶತ
ಯೊಗಸುತನನು ಕಂಡಳಂಗನೆ ಮಣಿಯ ಮಂಚದಲಿ ॥ ೩೬

ಹೊಳೆವ ಮಣಿದೀಪಾಂಶುಗಳ ಮು
ಕ್ಕುಳಿಸಿದುವು ಕಡೆಗಂಗಳಿಂದೂ
ಪಲದ ಭಿತ್ತಿಯ ಬೆಳಗನಣದುದು ಬಹಳ ತನುಕಾಂತಿ
ಲಲನೆಯುರ ಕಂಠದಲಿ ಕೈಗಳ
ನಿಳುಹಿ ನಿಂದಳು ತರಳೆ ನೃಪಕುಲ
ತಿಲಕನಂಗೋಪಾಂಗದಲಿ ಹರಹಿದಳು ಕಣ್ಮನವ ॥ ೩೭

ಎಳೆಯ ಬೆಳುದಿಂಗಳವೊಲೀಕೆಯ
ಥಳಥಳಿಪ ಮುಖಚಂದ್ರಮನ ತಂ
ಬೆಲರು ಸುಳಿದುದು ಸಾರತರಪರಿಮಳದ ಪೂರದಲಿ
ತಿಳಿದುದೀತನ ನಿದ್ರೆ ಕರಣಾ
ವಳಿಯ ಪರಮಪ್ರೀತಿರಸದಲಿ
ಮುಳುಗಿ ಸುಖಭಾರದಲಿ ಝುಲ್ಲವಿಸಿದನು ಕಲಿಪಾರ್ಥ ॥ ೩೮

ಹರ ಮಹಾದೇವೀಯಘಾಟದ
ಪರಿಮಳವಿದೆತ್ತಣದೆನುತ ಮೈ
ಮುರಿದು ಕಂಡನಪೂರ್ವ ಪರಿಮಳಸಾರವನು ಪಾರ್ಥ
ಕಿರಣ ಲಹರಿಯ ದಿವ್ಯರತ್ನಾ
ಭರಣ ರುಚಿರತರಪ್ರಭಾಪಂ
ಜರದೊಳಗೆ ಹೊಳೆಹೊಳೆವ ಮದನಾಲಸೆಯನೂರ್ವಶಿಯ ॥ ೩೯

ಹಾ ಮಹಾದೇವಿಯರಲಾ ಸು
ತ್ರಾಮನೋಲಗದೊಳಗೆ ನರ್ತನ
ರಾಮಣೀಯಕ ರಚನೆಯಲಿ ರಂಜಿಸಿದಳಾ ಸಭೆಯ
ಈ ಮಹಿಳೆಯಭಿನಂದನೀಯೆ ನಿ
ರಾಮಯದ ಶಶಿವಂಶಜನನಿ ಸ
ನಾಮೆಯೆಲ್ಲಾ ಶಿವಯೆನುತ ಮಣಿಮಂಚದಿಂದಿಳಿದ ॥ ೪೦

ಏಸಿ ಬಿಜಯಂಗೈದಿರಿತ್ತಲು
ಮಾನನಿಧಿ ಕುಳ್ಳಿರಿ ಸುರೇಶನ
ಮಾನಿಸಿಯರಭಿವಂದನೀಯರು ನಾ ಕೃತಾರ್ಥನಲಾ
ಏನು ಬೆಸಸೆನಗೇನು ಹದ ನಿಮ
ಗಾನು ಮಗನುಪಚಾರವೇಕೆ ಮ
ನೋನುರಾಗದಲಱುಹಿಯೆಂದನು ಪಾರ್ಥನೂರ್ವಶಿಗೆ || ೪೧

ನುಡಿಗೆ ಬೆಱಗಾದಳು ಮನೋಜನ
ಸಡಗರಕೆ ತೆಕ್ಕಿದಳು ಪಾರ್ಥನ
ನಡವಳಿಗೆ ಮೆಚ್ಚಿದಳು ಬೆಚ್ಚಿದಳಂಗಜಾಸ್ತ್ರದಲಿ
ಕಡುಗಿದಳು ಖಾತಿಯಲಿ ಲಜ್ಜೆಯ
ಬಿಡೆಯದಲಿ ಭಯಗೊಂಡಳೂರ್ವಶಿ
ಮಿಡುಕಿದಳು ವಿವಿಧಾನುಭಾವದ ರಸದ ಭಂಗಿಯಲಿ || ೪೨

ಏಕೆ ನುಡಿದನೊ ಚಿತ್ರಸೇನನ
ದೇಕೆ ನಾ ಕೈಕೊಂಡೆನೆತ್ತಣ
ಕಾಕು ಮೂಳಗೆ ಕೋಳುವೋದೆನು ಕಾಮನೆಂಬವಗೆ
ಲೋಕವರ್ತಕನಲ್ಲದವನನ
ನೇಕೆ ವಿಧಿ ನಿರ್ಮಿಸಿದನೋ ತಾ
ನೇಕೆ ನರನೇಕೆನುತ ಸುಯ್ದಳು ಬೈದು ಕಮಲಜನ || ೪೩

ಎಲವೊ ರಾಯನ ಹೇಳಿಕೆಯಲಂ
ಡಲೆದನೆನ್ನನು ಚಿತ್ರಸೇನಕ
ನಲುಗಿ ನಟ್ಟುವು ಕಾಮಶರವೆನ್ನಂತರಂಗದಲಿ
ಒಲಿದು ಬಂದಬಲೆಯರ ಟೆಕ್ಕರಿ
ಗಳವುದೇ ವಿಟಧರ್ಮವಕಟಾ
ತಿಳಿಯಲಾ ತಾನಾವಳೆಂಬುದನೆಂದಳಿಂದುಮುಖಿ || ೪೪

ಶಿವ ಶಿವೀ ಮಾತೇಕೆ ಕಾಮನ
ಭವಣೆಯಲಿ ಸೀವಱಿಯದಿರೆ ವಾ
ಸವನ ನೇಮವು ಚಿತ್ರಸೇನನ ನುಡಿಗಳಂತಿರಲಿ

ಯೆವಗಕರ್ತವ್ಯದಲಿ ಮನ ಸಂ
ಭವಿಸುವುದೆ ನೀವೆಮ್ಮ ವಂಶೋ
ದ್ಭವಕೆ ಜನಸಿಯಲಾಯೆನುತ ಕೈಮುಗಿದು ಪ್ರೌಡವಮುಟ್ಟ ॥ ೪೫

ನಾರಿ ನೀ ಪೂರ್ವದಲಿ ನಮ್ಮ ಪು
ರೂರವನ ಸತಿ ನಿಮಗೆ ಬಳಿಕ ಕು
ಮಾರ ಜನಿಸಿದನಾಯು ಆತನೊಳುದಿಸಿದನು ನಹುಷ
ವೀರ ರಾಜಪರಂಪರೆಯು ಬರ
ಲಾರಿಗಾವುದಿಸಿದೆವು ನೀವು ವಿ
ಚಾರಿಸಿದುದಿಲ್ಲಾಯೆನುತ ವಿನಯದಲಿ ನರ ನುಡಿದ ॥ ೪೬

ಪ್ರಣವದರ್ಥ ವಿಚಾರವೆತ್ತಲು
ಗಣಿಕೆಯರಮನೆಯಲಿ ಸ್ವರಾಕ್ಷರ
ಗಣಿತಲಕ್ಷಣವೆತ್ತ ರತಿಕೇಳೀವಿಧಾನದಲಿ
ಬಣಗುಭಾರತವರುಷರವದಿರ
ಭಣಿತ ನಮ್ಮೀ ದೇವಲೋಕಕೆ
ಸಣಬಿನಾರವೆ ಚೈತ್ರರಥದೊಳಗೊಂದಳಿಂದುಮುಖಿ ॥ ೪೭

ಅಯ್ಯನೈಯ್ಯನು ನಿಮ್ಮವರ ಮು
ತ್ತೈಯ್ಯನಾತನ ಭಾವಮೈದುನ
ನಯ್ಯನಗ್ರಜರನುಜರೆಂಬೀ ಜ್ಞಾತಿ ಬಾಂಧವರ
ಕಯ್ಯಲರಿಗಳ ಹೊಯಿದು ಶಿರನರ
ದುಯ್ಯಲಾಡುವವರ್ಗೆ ಮೇಣ್ಮುಖಿ
ದಯ್ಯಗಳಿಗಾನೊಬ್ಬಳೆಂದಳು ನಗುತ ತರಳಾಕ್ಷಿ ॥ ೪೮

ಮಱೆಯ ಮಾತಂತಿರಲಿ ನೀನಿದ
ಮಱೆದು ಕಳೆ ಮಾನಿನಿಯರಿಚ್ಛೆಯ
ನಱಿಯದವನು ಸುರೇಂದ್ರನಾಗಲಿ ಚಂದ್ರನಾಗಿರಲಿ
ಕುಱಿ ಕಣಾ ಘಡ ಖೂಳ ನೀನೆಂ
ತಱವೆಯೆನೆ ನಡನಡುಗಿ ಕೈಮುಗಿ
ದೆಱಗಿ ಮಗುಳೀ ಮಾತನೆಂದನು ಪಾರ್ಥನೂರ್ವಶಿಗೆ ॥ ೪೯

ಇದು ಮನುಷ್ಯಶರೀರ ತದ್ಧ
ರ್ಮದಲಿ ತನ್ನವಸಾನಪರಿಯಂ
ತದಱೊಳವ್ಯಭಿಚಾರದಲಿ ವರ್ತಿಸಿದ ಬಳಿಕಿನಲಿ
ತ್ರಿದಶರಲ್ಲಿಗೆ ಬಂದರಾ ಮಾ
ರ್ಗದಲಿ ನಡೆವುದು ದೇವತಾದೇ
ಹದಲಿ ಬಲವತ್ತರವು ದೇಹವಿಶೇಷವಿಧಿಯೆಂದ || ೫೦

ಅಹುದಹುದಲೇ ಶ್ರೌತಪಥದಲಿ
ಬಹಿರಿ ನೀವೇ ಸ್ಮಾರ್ತವಿಧಿಸಂ
ನಿಹಿತವೆಂಬುವುದನಱಿಯದೇ ಮೂಲೋಕ ಜನವೆಲ್ಲ
ಮಹಿಳೆಯೊಬ್ಬಳೊಳೈವರೊಡಗೂ
ಡಿಹರು ನೀವೇನಲ್ಲಲೇ ನಿ
ಸ್ಪೃಹರು ನೀವ್ ನಮ್ಮಲ್ಲಿ ಹರಹರಯೆಂದಳಿಂದುಮುಖಿ || ೫೧

ತಾಯನೇಮದಲಂದು ಕಮಲದ
ಳಾಯತಾಕ್ಷಿಯ ಸಂಗವೈವರಿ
ಗಾಯಿತದು ತಪ್ಪೇನು ಜನನಿಯ ನುಡಿಯಲಂಘ್ಯವಲೆ
ಕಾಯಸೌಖ್ಯಕೆ ಕಾಮಸುಖದ ವಿ
ಡಾಯತತ್ವಕೆ ವೇಧೆಗೊಂಡು ನ
ವಾಯಿಯಲಿ ದುರ್ಗತಿಗೆ ದುವ್ವಾಳಿಸುವನಲ್ಲೆಂದ || ೫೨

ತಾಯ ನೇಮದಲೈವರಿಗೆ ಕಮ
ಳಾಯತಾಕ್ಷಿಯ ಕೂಟವೇ ಸುರ
ರಾಯ ನಿಮ್ಮಯ್ಯನು ವಿಲಂಘ್ಯವೆ ನಿನಗೆ ಪಿತೃವಚನ
ರಾಯನಟ್ಟಲು ಬಂದೆನೀ ಕುಸು
ಮಾಯುಧನ ಕಗ್ಗೊಲೆಯ ತೆವಱುವು
ಪಾಯವನು ನೀ ಬಲ್ಲೆಯೆಂದಳು ವನಿತೆ ವಿನಯದಲಿ || ೫೩

ಕಾಡಲಾಗದು ನಿಮ್ಮೊಡನೆ ಮುಱಿ
ದಾಡಲಮ್ಮೆನು ಮನಕೆ ಧೈರ್ಯದ
ಜೋಡ ತೊಟ್ಟಿದರಾಗಿ ನಿಲೆ ನನೆಯಂಬು ತಾಗುವವೆ

ಖೋಡಿಯೇಕಿಗಕವ್ವೆ ಮಕ್ಕಳ
ನೋಡಬಂದರೆ ಬೇಱಿ ಕಷ್ಟವ
ನಾಡುವರೆ ಬಲ್ಲವರು ಬಿಜಯಂಗೈಯ್ಯಿ ನೀವೆಂದ || ೫೪

ರೋಷವೆರಡೆಲೆಯಾಯ್ತು ಲಜ್ಜೆಯು
ಮೀಸಲಳಿದುದು ಬಹುವಿಧದ ಬಲು
ವಾಸಿಗಳು ಪಲ್ಲವಿಸಿದವು ಕೆಲ್ಲವಿಸಿತನುತಾಪ
ಆಸೆ ಪೈಸರವೋಯ್ತು ಕಡುರ್ಘುಳ
ಸೂಸಿದುದು ಸುಯಿಲಿನಲಿ ಕಂಗಳು
ಕೇಸರಿಯು ಮುಕ್ಕುಳಿಸಿದವು ಹೆಕ್ಕಳಿಸಿ ಕಾಮಿಸಿಯು || ೫೫

ಕೆತ್ತಿದುವು ತುಟಿ ಕದಪಿನಲಿ ಕೈ
ಹತ್ತಿಸುತ ತೂಗಿದಳು ಶಿರವನು
ತತ್ತಕೋಪಾಯುಧವ ಮಸೆದಳು ಧಾರೆಗಂಗಳಲಿ
ಎತ್ತಿದುಬ್ಬೇಗದ ವಿಕಾರದ
ಚಿತ್ತ ಬುದ್ಧಿ ಮನಂಗಳಾತ್ಮನ
ಜೊತ್ತಿಸಿದವದುಭುತವಹಂಕಾರದಲಿ ಸುರಸತಿಯು || ೫೬

ರಾಹು ತುಡುಕಿದ ಶಶಿಯೊ ಮೇಣ್ ರೌ
ದ್ರಾಹಿಮಸ್ತಕಮಾಣಿಕವೊ ಕಡು
ಗಾಹಿನಮೃತವೊ ಕುಪಿತಸಿಂಹದ ಗುಹೆಯೊ ಮೃಗಮದವೊ
ಲೋಹಧಾರೆಯ ಮಧುವೊ ಕಲಿತ ಹ
ಲಾಹಲದ ಕಜ್ಜಾಯವೆನಿಸಿತು
ರೂಹು **ಸುಮನೋಹರ ಭಯಂಕರವಾಯ್ತು** ಸುರಸತಿಯ || ೫೭

ಎಲವೊ ಭಂಡರ ಭಾವ ಖೂಳರ
ನಿಳಯ ಖಳರಧಿನಾಥ ವಂಚಕ
ತಿಲಕ ಗಾವಿಲರೊಡೆಯ ಬಂಧುವೆ ದುಷ್ಟನಾಯಕರ
ಎಲೆ ಮರುಳೆ ತಾನಾವಳೆಂಬುದ
ತಿಳಿಯಲಾ ನೀನಾವನೆಂಬುದ
ನಿಳೆಯಲಱಿಯರೆ ಭಂಡ ಫಡ ಹೋಗೆಂದಳಿಂದುಮುಖಿ ೫೮

ಒಲಿದು ಬಂದವರಾವು ಸೊಬಗಿನೊ
ಳೊಲಿಸಿ ಮಱುಗಿಪ ವಿಟನು ನೀನತಿ
ಸುಲಭರಾವ್ ದುರ್ಲಭನು ನೀ ದೇವೇಂದ್ರಕಟಕದಲಿ
ಎಲೆ ನಪುಂಸಕ ಗಂಡು ವೇಷದ
ಸುಳಿವು ನಿನಗೇಕೆನುತ ಸತಿ ಕಳ
ವಳಿಸಿ ಕರವೆತ್ತಿದಳು ಹಿಡಿ ಹಿಡಿ ಶಾಪವಿದೆಯೆನುತ ॥ ೫೯

ನರಮೃಗಾಧಮ ನಿಮ್ಮ ಭಾರತ
ವರುಷ ಭೂಮಿಯೊಳೊಂದು ವರುಷಾಂ
ತರ ನಪುಂಸಕನಾಗಿ ಚರಿಸು ನಿರಂತರಾಯುದಲಿ
ಹರಿಯ ಮಱೆಯೊಗು ಹರನ ನೀನನು
ಸರಿಸು ನಿಮ್ಮಯ್ಯಂಗೆ ಹೇಳಿದು
ನಿರುತ ತಪ್ಪದು ಹೋಗೆನುತ ಮುಖದಿರುಹಿದಳು ತರಳೆ ॥ ೬೦

ಮೂಗನಾದನು ಬಹಳ ಧೈರ್ಯದ
ಬೇಗಡೆಯು ಬಿಡೆ ಬಿಗಿದ ಬೆಱಗಿನ
ಮೂಗಿನಂಗುಲಿಗಳ ಧನಂಜಯನೊಲಿದು ನಿಜ ಶಿರವ
ಆಗಡಿಗರು ಯಿವರಮರಸತಿಯರು
ನಾಗರಿಗರಿವರೆತ್ತ ಭಾರತ
ಭೂಗತರು ನಾವೆತ್ತಲಿದು ಘಟಿಸಿದುದು ವಿಧಿಯೆಂದ ॥ ೬೧

ತಪವನಾಚರಿಸಿದರೆ ವರಪಾ
ಶುಪತವೆನಗಾಯ್ತು ಧರ್ಮವೆ
ತಪವಲಾಯೆಂದಱಿದು ನಡೆದರೆ ಷಂಡತನವಾಯ್ತು
ತಪವೆರಡು ಸರಿಫಲದೊಳಾದುದು
ವಿಪರಿತದ ಗತಿ ಗಹನತರವೇ
ವಿಪುಳಕರ್ಮಸ್ಥಿತಿಯೆನುತ ತೂಗಿದನು ನಿಜಶಿರವ ॥ ೬೨

ಶಿವನ ಶರವೆನಗಾಯ್ತು ರಿಪುಕೌ
ರವರ ರಕುತದ ಜೂಟಳವನೆ
ತ್ತುವೆನು ಕಟ್ಟಾ ಮುಡಿಯನೆಂಬೆನೆ ದ್ರೌಪದೀಸತಿಗೆ ॥

ಇವಳು ಭಂಗಿಸಿ ಬೂತುಗೆಡಹಿದ
ಹವಣನಾರಿಗೆ ಹೇಳುವೆನು ವರ
ಯುವತಿಗೀ ನುಡಿಯೊಸಗೆಯೇ ಹಾಯೆನುತ ಚಿಂತಿಸಿದ || ೬೩

ಅರಸ ಕೇಳೈ ಚಿತ್ರಸೇನನ
ಕರೆಸಿ ಊರ್ವಶಿ ಪಾರ್ಥ ಮಾಡಿದ
ದುರುಳತನವನು ದೂಱಿದರೆ ಸುರಸತಿಯ ಸಂತೈಸಿ
ಸುರಪತಿಗೆ ಗಂಧರ್ವನಿವರಿ
ಬ್ಬರ ವಿರೋಧನಿಬಂಧನವನೆ
ಚ್ಚರಿಸಲರ್ಜುನನರಮನೆಗೆ ಬಂದನು ಬಲಧ್ವಂಸಿ || ೬೪

ಮಗನ ತೆಗೆದಪ್ಪಿದನು ಕಂದಗೆ
ದುಗುಡವೇಕೆನ್ನಾನೆಗೆತ್ತಣ
ದುಗುಡವೆನ್ನರಸಂಗೆ ಯೆತ್ತಣ ದೆಸೆಯ ದುಮ್ಮಾನ
ನೊಗದ ತನಿ ಹಳಹಳಿಕೆ ನೇತ್ರಾಂ
ಬುಗಳೊಳದ್ದುದು ನಿಜಮನೋವೃ
ತ್ತಿಗಳೊಳಗೆ ನುಡಿ ಮುಳಿಗಿತೇನಿದು ಚಿತ್ರವಾಯ್ತೆಂದ || ೬೫

ನುಡಿಸೆ ತಲೆವಾಗಿದನು ಲಜ್ಜೆಯ
ಝಡಿತೆಯಲಿ ಝೊಮ್ಮೈಱಿದಂತಿವೆ
ಮಿಡುಕದಿರೆ ಮುಗುಳಪ್ಪಿ ಹರಿ ಮೊಗನೆಗಹಿ ಮುಂಡಾಡಿ
ಬಿಡು ಮನೋಗ್ಲಾನಿಯನು ಸತಿ ಕೆಡೆ
ನುಡಿದುದೆಲ್ಲವನೆನಗೆ ಸೈರಿಸು
ಮಡದಿಯರಲೇನುಂಟು ಫಲವೆನ್ನಾಣೆ ಹೇಳೆಂದ || ೬೬

ಎಲೆ ಕಿರೀಟಿ ವೃಥಾ ಮನೋವ್ಯಥೆ
ತಳಿದುದೇನೂರ್ವಶಿಯ ಶಾಪದೊ
ಳಳುಕಿದೈ ತತ್ಕ್ರೋಧ ನಿನಗುಪಕಾರವಾಯ್ತು ಕಣಾ
ಹಳುವದಲಿ ಹನ್ನೆರಡು ವರುಷದ
ತಲಹಿನಜ್ಞಾತದಲಿ ವರುಷವ
ಕಳೆವಡಿದು ಸಾಧನವು ನಿನಗೆ ಶಿಖಂಡಿತನವೆಂದ || ೬೭

ಖೋಡಿಯಿಲ್ಲೆಲಿ ಮಗನೆ ಚಿಂತಿಸ
ಬೇಡ ನಿನ್ನಜ್ಞಾತದಲಿ ನೆಱೆ
ಜೋಡಲಾ ಜಾಣಾಯ್ಲು ರಿಪುಜನದೃಷ್ಟಿ ಶರಹತಿಗೆ
ಕೂಡಿತಿದು ಪುಣ್ಯದಲಿ ಸುರವಧು
ಮಾಡಿದುಪಕೃತಿ ನಿಮ್ಮ ಭಾಷೆಯು
ಬೀಡ ಸಲಹಿದುದಱಿಯಲಾ ಸಾಹಿತ್ಯನಲ್ಲಿಂದ || ೬೮

ಎಂದು ಪಾರ್ಥನ ಸಂತವಿಟ್ಟು ಪು
ರಂದರನು ತನ್ನರಮನೆಗೆ ನಡೆ
ತಂದನರ್ಜುನಸಹಿತ ವಿವಿಧ ವಿನೋದವಿಭವದಲಿ
ಅಂದು ಶಿಖಿ ಪವನಾದಿಗಳು ನಲ
ವಿಂದ ಕೊಟ್ಟರು ಶರವನಮರೀ
ವೃಂದ ಸೂಸಿತು ಸೇಸೆಯನು ಜಯರವದ ರಭಸದಲಿ || ೬೯

ಸುರಪನರುಹಿದನಸ್ತ್ರ ಶಸ್ತ್ರೋ
ತ್ಕರರಹಸ್ಯವನಮರಭೂಮಿಯು
ಭರತವಿದ್ಯವನಱುಹಿಸಿದನಾ ಶಾಸ್ತ್ರವಿಧಿಯಿಂದ
ಸುರರಿಗಲಗಣಸಾದ ದೈತ್ಯರ
ನೊರೆಸಿದನು ಸತ್ಕೀರ್ತಿಲತೆ ಕುಡಿ
ವರಿದು ಬೆಳೆದುದು ವೀರನಾರಾಯಣನ ಮೈದುನನ || ೭೦

ಅರಸ ಕೇಳೈ ಪಾರ್ಥನಿದ್ದನು
ವರುಷವೈದಱೊಳಿಂದ್ರಭವನದ
ಸಿರಿಯ ಸಮ್ಮೇಳದ ಸಘಾಡದ ಸಾರಸೌಖ್ಯದಲಿ
ನರನ ಹದನೇನೋ ಧನಂಜಯ
ನಿರವದೆಲ್ಲಿ ಕಿರೀಟಿ ನಮ್ಮನು
ಮಱೆದು ಕಳೆದನಲಾಯೆನುತ ಯಮಸೂನು ಚಿಂತಿಸಿದ || ೭೧

ಅರಸನಲಿ ಬೇರೂಱಿ ಬಳಿಕಂ
ಕುರಿಸಿದುದು ಭೀಮನಲಿ ನಕುಲನ
ಲೆರಡು ಮೂರೆಲೆವೋಯ್ತು ಸಹದೇವನಲಿ ಕವಲೊಡೆದು

ಅರಸಿಯಲಿ ಸಲೆ ಹೊತು ಕಾತು
ಬ್ಬರಿಸುತಿದ್ದುದು ಶೋಕಲತೆ ತ
ತ್ಪರಿಕರದ ಕರುಣಾವಳಿಯು ಹಬ್ಬುಗೆಯು ಹರಹಿನಲಿ || ೭೨

ವಾಮನಯನಸ್ಫುರಣಪರಿಗತ
ವಾಮಬಾಹುಸ್ಪಂದವಾದುದು
ಭಾಮಿನಿಗೆ ಭೂಪತಿಗೆ ಚಲಿಸಿತು ದಕ್ಷಿಣಾಂಗದಲಿ
ವೈಮನಸ್ಯವ್ಯಸನನಿರಸನ
ಕೀ ಮಹಾಶಕುನಂಗಳಿವೆಯೆಂ
ದಾ ಮಹೀಪತಿ ನೆನೆಯುತಿರ್ದನು ಫಲುಗಣನ ಬರವ || ೭೩

ಅರಸ ಕೇಳೈ ಹಿಮದ ಹೊಯ್ಲಿನ
ಸರಸಿಜಕೆ ರವಿಯಂತೆ ಶಿಶಿರದ
ಸರಿದೆಲೆಯ ಬನದಲಿ ವಸಂತನ ಬರವಿನಂದದಲಿ
ಸುರವಿಮಾನಶ್ರೇಣಿಗಳ ನವ
ಪರಿಮಳದ ಪೂರದಲಿ ಭಾರತ
ವರುಷಕಿಳಿದನು ಪಾರ್ಥ ಬಂದನು ಧರ್ಮಜನ ಹೊರೆಗೆ || ೭೪

ಅರಸಕೇಳುಬ್ಬಿನಲಿ ಧೌಮ್ಯನ
ಧರಣಿಪನ ರೋಮಶನ ಭೀಮನ
ಚರಣದಲಿ ವೈಯಿಕ್ಕಿ ಕೈಮುಗಿದೆಱಗಿ ಮುನಿಜನಕೆ
ಹರಸಿದನು ಪೊಡವಂಟ ನಕುಲಾ
ದ್ಯರನು ಮಧುರಪ್ರೀತಿವಚನ
ಸ್ಫುರದಮಂದಸ್ನೇಹದಲಿ ನೋಡಿದನು ಪರಿಜನವ || ೭೫

ಭಜಿಸಿದೈ ಭರ್ಗನನು ಶಾಂಭವ
ಯಜನಸಾರಸಮಾಧಿ ಶಿವಪದ
ರಜವ ಬೆಱಸಿತೆ ಬಗೆಯ ಕುಳಿ ತೆವರಾಯ್ತೆ ತಡಿಕೆಗೆದು
ವಿಜಯ ಶಬ್ದವು ಪಾರ್ಥಕೃತಿಯಲಿ
ಮಜಡವಲ್ಲಲೆ ವೈರಿರಾಯರ
ಕುಜನ ತಾ ವಿಚ್ಛೇದಸಾಧ್ಯವೆಯೆಂದನಾ ಭೂಪ || ೭೬

ಜೀಯ ಚಿತ್ರೈಸಿಂದ್ರನಲ್ಲಿ ಸ
ಹಾಯವಾದನು ಶಿವನ ಕಾರು
ಣ್ಯಾಯುಧವೆ ಮಸೆದುದು ಸುರೇಂದ್ರಸ್ನೇಹಸಾಣೆಯಲಿ
ಆಯಿತೇ ಧೂರ್ಜಟಿಯ ಶರ ಲೋ
ಕಾಯತರಿಗೇನೆಂಬೆನದು ನಿ
ರ್ದಾಯದಲಿ ವಶವರ್ತಿಯಾಯ್ತೆನಗೆಂದನಾ ಪಾರ್ಥ || ೭೭

ಕೇಳಿ ಮಿಗೆ ಹಿಗ್ಗಿದನು ತನುರೋ
ಮಾಳಿ ತಳಿತವು ಹರುಷವಾರಿಗ
ಳಾಲಿಗಳ ಹೂಳಿದವು ತೂಳಿದುವಂತರವ್ಯಥೆಯ
ತೋಳ ಹಿಡಿದೆಳೆದಪ್ಪಿ ಪಾರ್ಥನ
ಬೋಳವಿಸಿದನು ಪೌರವಾನ್ವಯ
ಪಾಲಕನೆಯೆಂದರಸ ಮುಂಡಾಡಿದನು ಫಲುಗುಣನ || ೭೮

ಮುಱಿದುದಿನ್ನೇನಹಿತಬಲ ಹಗೆ
ಹಱಿದುದೈ ದ್ರೌಪದಿಯ ಮೌಳಿಗೆ
ಕಱುಬಿದವರಿಗೆ ಕಾಣಲಾಯ್ತು ಕೃತಾಂತನೋಲಗವ
ಕಱಿಸಿದನೇ ಕರುಣವನು ಹರ ಹರ
ಹೆಱಿಸೆನೊಸಲ ಬಲುದೈವವಿನಿತಱಿ
ಹೊಱಿಸಿಗೆ ಗದುಗಿನ ವೀರನಾರಾಯಣನ ಕರುಣದಲಿ || ೭೯

## ೭. ಘೋಷಯಾತ್ರೆ

ಅರಸ ಕೇಳೈ ಹಸ್ತಿನಾಪುರ
ವರಕೆ ಕಾಮ್ಯಕವನದಿನೊಬ್ಬನು
ಧರಣಿಸುರನೈತಂದು ಕರ್ಣಾದಿಗಳ ಭವನದಲಿ
ಇರಲಿರಲು ಧೃತರಾಷ್ಟ್ರಭೂಪತಿ
ಕರೆಸಿ ಬೆಸಗೊಂಡನು ಯುಧಿಷ್ಠಿರ
ನಿರವನಟವೀತಟಪರಿಭ್ರಮ ಭೂರಿಭೀಷಣವ || ೧

ವಿವಿಧ ವನಪರ್ಯಟನದಾಯಾ
ಸವನು ತತ್ಪರಿಸರದ ಕಂಟಕ
ನಿವಹವನು ದಾನವರ ಧಕ್ಕಡತನದ ಧಟ್ಟಣೆಯ
ಅವಚಿದಾಪತ್ತಿನ ಮನಃಖೇ
ದವನು ಖೋಡಿಯ ಖತಿಯ ಲಜ್ಜಾ
ವಿವರಣವನಱುಹಿದನು ದ್ವಿಜ ಧೃತರಾಷ್ಟ್ರ ಭೂಪತಿಗೆ ‖ ೨

ಈ ವಿಧಿಯೆ ಪಾಂಡವರಿಗಕಟಾ
ಸಾವು ಸೇರದು ತನಗೆ ತಾಗುವ
ನೋವ ನೋಂತೆನೆ ಶಿವ ಶಿವಾ ಭವ ಭವಸಹಸ್ರದಲಿ
ಈ ವಿಲಾಸವನೀ ವಿಭವಸಂ
ಭಾವನೆಯನೀ ಪದವನೀ ಪು
ತ್ರಾವಳಿಯ ಸುಡಲೆಂದು ಸಲೆ ಮಱುಗಿದನು ಧೃತರಾಷ್ಟ್ರ ‖ ೩

ಅಳಲುವೀ ಧೃತರಾಷ್ಟ್ರನುಱು ಕಳ
ಕಳವ ಕೇಳಿದು ಕರ್ಣ ಶಕುನಿಗ
ಳುಲಿದು ತಂಬುಲ ಸೂಸೆ ನಕ್ಕರು ಹೊಯ್ದು ಕರತಳವ
ಖಳ ಶಿರೋಮಣಿಗಳು ಮಹೀಶನ
ಸಿಳಯಕೈತಂದರು ವಿಲೋಚನ
ಜಲವ ಸೆಱಗಿನಳೊಱಸಿ ನುಡಿದರು ಖೇದವೇಕೆನುತ ‖ ೪

ಖೇದವೇಕೆಂದೇನು ಮಕ್ಕಳು
ಬೀದಿಗಱುವಾದರು ವನಾಂತದ
ಲಾದ ಚಿತ್ತವ್ಯಥೆಯ ಕೇಳಿದು ಬೆಂದುದೆನ್ನೊಡಲು
ಆ ದಿವಾಕರನಂತೆ ನಿಚ್ಚಲು
ಕಾದುದುದಯಾಸ್ತಮಯದಲಿ ದನು
ಜಾದಿ ಖಳರೊಡನಟವಿಗೋಟಲೆಯೆನುತ ಬಿಸುಸುಯ್ದ ‖ ೫

ಈ ಕುಮಾರಕರಲ್ಲಲೇ ಕುಂ
ತೀಕುಮಾರರು ನವೆವುತಿರ್ದರೆ
ಸಾಕು ಸಾಕಳಲೇಕೆ ಸತ್ವಾಧಿಕರು ಸಜ್ಜನರು

ಈ ಕುರುಕ್ಷಿತಿಪತಿಯೊಳನ್ಯಾ
ಯೈಕಲವವಿಲ್ಲಲೆ ವಿಚಾರಿಸಿ
ಶೋಕವನು ಬಿಡಿ ಬಯಲಡೊಂಬೇಕೆಂದನಾ ಶಕುನಿ || ೬

ವಿಷಯಲಂಪಟರಕ್ಷಲೀಲಾ
ವ್ಯಸನಕೋಸುಗವೊತ್ತೆಯಿಟ್ಟರು
ವಸುಮತಿಯಲನ್ಯಾಯವುಂಟೇ ನಿನ್ನ ಮಕ್ಕಳಲಿ
ಉಸುರಲಮ್ಮದೆ ಸತ್ಯವನು ಪಾ
ಲಿಸಲು ಹೊಕ್ಕರರಣ್ಯವನು ತದ್
ವ್ಯಸನಫಲಭೋಗಿಗಳಿಗೇಕಳಲುವಿರಿ ನೀವೆಂದ || ೭

ಆಹ ಶಕುನಿಯ ಮಾತಿನಲಿ ಸಂ
ದೇಹವೇ ಪಾಂಡವರು ಬಂಧು
ದ್ರೋಹಿಗಳು ತಮ್ಮವಧಿ ತುಂಬಲು ಕೇಡ ತಹರೆಂಬ
ಈ ಹದನು ತಪ್ಪುವುದೆ ನೀವತಿ
ಮೋಹದಲಿ ನೆಱೆ ಬಸಿದು ಬಿದ್ದರೆ
ಕಾಹುರರು ಕೌರವರ ಕೆಡಿಸುವರೆಂದನಾ ಕರ್ಣ || ೮

ಸೊಗಸು ತಳಿತುದು ತರಳಮನ ತಳ
ಮಗುಚಿದಂತಾಯ್ತುವರೊಲವು ಕಾ
ಡಿಗೆಯ ಕೆಸಱೊಳದ್ದ ನೀಲದ ಸಱಿಯ ತೆಱನಾಯ್ತು
ಒಗುವ ಕಂಗಳ ಬಾಷ್ಪಬಿಂದುವ
ನುಗುರುಮೊನೆಯಲಿ ಮಿಡಿದು ಕರ್ಣನ
ಹೊಗಳಿದನು ಬಳಿಕೇನು ಸಿಂಗಿಯಲುಂಟೆ ಸವಿಯೆಂದ || ೯

ಹೋಗಲಾ ಪಾಂಡವರ ಚಿಂತೆಯ
ನೀಗಿದೆನು ನೀವಿನ್ನು ನೆನೆವು
ದ್ಯೋಗವೇನೆನೆ ನಗುತ ನುಡಿದರು ಕರ್ಣ ಶಕುನಿಗಳು
ಈಗಳೇ ವಿಭವದ ವಿಲಾಸದ
ಭೋಗದಗ್ಗಳಿಕೆಗಳ ಭುಜದ
ಪಾಗಮುವನವರಿದ್ದ ಬನದಲಿ ತೋಱಬೇಕೆಂದ || ೧೦

ನಾಡೊಳಗೆ ತುಱುಹಟ್ಟಿಯಲಿ ಹೊಲ
ನಾಡಿ ಹೆಚ್ಚಿದ ಗೋಕದಂಬವ
ನೋಡುವುದು ನೆವ ಕುರುಪತಿಯ ಗಾಢದ ಸಘಾಡಿಕೆಯು
ನೋಡಿ ಸುಯ್ಯಲಿ ಪಾಂಡುಸುತರವ
ರಾಡುಗಾಡಿನ ಹೊಲನ ಹೊರೆಯಲಿ
ಕೂಡೆ ತನುಪರಿಮಳದಲರಮನೆಯಂಗನಾನಿವಹ | ೧೧

ಹೂಣೆ ಹೊಗೆವವರೊಡನೆ ಸೆಣಸಿನ
ಸಾಣೆಯಿಱುಕ್ಕುವ ಮಸೆವ ಕದನವ
ಕಾಣೆವೆಮ್ಮರಿಕೆಯಲಿ ಸಲಿಗೆಯ ಸಾಧು ಸಾಮದಲಿ
ರಾಣಿಕದ ರಹಿಯಿಂದ ರಂಜಿಸಿ
ಜಾಣಿನಲಿ ಬಹೆವರಸ ನಿಮ್ಮಡಿ
ಯಾಣೆ ಬಹೆವೆಂದೊಡಬಡಿಸಿದರು ನೃಪ ಕರ್ಣ ಶಕುನಿಗಳು || ೧೨

ಪರಿಮಿತದೊಳೀ ವಾರ್ತೆ ನೆಗಳಿದು
ಧರಮನೆಯನಿದನೈದೆ ಕೇಳಿದು
ಗುರು ವಿದುರ ಗಾಂಗೇಯ ಕೃಪರಳಲಿದರು ತಮ್ಮೊಳಗೆ
ಕರೆಸಿ ನುಡಿದರು ಶಕುನಿ ರವಿಸುತ
ಕುರುಪತಿಗಳಿಗೆ ಘೋಷಯಾತ್ರಾ
ಭರವನಱಿದೆವು ಹೋಹುದನುಚಿತವೆಂದರನಿಬರಿಗೆ || ೧೩

ಅವಗಡೆಯನಾ ಭೀಮ ನೀವೆಂ
ಬವರು ನಿಸ್ಸೀಮರು ಚತುರ್ಬಲ
ನಿವಹ ಸಿಲ್ಲದು ತುಡುಕುವುದು ತುಳಿವುದು ತಪೋವನವ
ವಿವಿಧ ಋಷಿಗಳನೇಡಿಸುವರೀ
ಯುವತಿಯರು ಕೈಕಾಲು ಮೆಟ್ಟಿನ
ಬವರ ಗಂಟಿಕ್ಕುವುದು ಲೇಸಲ್ಲೆಂದನಾ ಭೀಷ್ಮ || ೧೪

ಸಾಱಿದೆವು ನಿಮ್ಮೊಡನೆ ಬಾರೆವು
ದೂಱಲಾಗದು ನಮ್ಮನಿನಿಬರ
ಮೀರಿದರೆ ರಣಭಂಗ ತಪ್ಪದು ಹೋಗಿ ನೀವೆನಲು

ದೂಱತಾರೆವು ನಿಮಗೆ ನಾವ್ ಕೈ
ಮೀರಿ ನಡೆಯೆವು ಕಾರ್ಯಗತಿಯಲಿ
ಜಾಱಿ ಝುಡಿತೆಯ ಮಾಡೆವೆಂದನು ಕೌರವರ ರಾಯ || ೧೫

ಆವಡೇಳಿ ಶುಭೋದಯದ ಫಲ
ಬೀದಿವರಿಸುವುದೈಸಲೇ ನಿಮ
ಗೀ ದುರಾಗ್ರಹವೇಕೆ ಕಾಬಿರಿ ಫಲವನಗ್ರದಲಿ
ಆದುದಾಗಲಿ ಹೋಗಿಯೆನೆ ದು
ರ್ಭೇದಗರ್ವಗ್ರಂಥಿ ಕಲುಷ ವಿ
ನೋದಶೀಲರು ಭುಜವ ಹೊಯ್ದರು ನೋಡಲಹುದೆನುತ || ೧೬

ಊರೊಳಗೆ ಸಾಱಿದರು ಕೊಟ್ಟರು
ವಾರಕವನಬಲಾಜನಕೆ ಭಂ
ಡಾರ ಸವೆದುದು ಗಣಿಕೆಯರಿಗಾಭರಣದಾನದಲಿ
ಸಾರಪರಿಮಳವಸ್ತುಗಳ ಬಲು
ಭಾರಣೆಯ ಪೆಟ್ಟಿಗೆಗಳೊಟ್ಟಿತು
ತೇರುಗಳ ಮೇಲೊದಗಿತಕ್ಷೋಹಿಣಿಯ ನಾರಿಯರು || ೧೭

ನೆರೆದುದಗಣಿತ ಮಂದಿಗಳು ಕವಿ
ವರರು ವಿದ್ವಾಂಸರು ವಿಧಾವಂ
ತರು ಸುನರ್ತಕ ಕಥನ ಪರಿಹಾಸಕರು ಮಾಗಧರು
ಚರರು ಮಲ್ಲರು ಬೇಂಟೆಕಾಱರು
ಪರಿಜನಾವಳಿಸಹಿತ ನಗರಾಂ
ತರದ ಪಯಣದ ಮೇಲೆ ಪಯಣದಲರಸನೈತಂದ || ೧೮

ಧರಣಿಪತಿ ಕೇಳ್ ದ್ವೈತವನ ಬಂ
ಧುರನದೀ ತೀರದಲಿ ವನದಲಿ
ಸರಸಿಯಲಿ ದೀರ್ಘಿಕೆಗಳಲಿ ವಾಪೀತಟಾಕದಲಿ
ಬೆರಸಿ ಬಿಟ್ಟುದು ಕೂಡೆ ಪಾಳೆಯ
ವರಮನೆಯ ಗುಡಿ ನೆಗಹಿದವು ವಿ
ಸ್ತರಿಸಿದವು ಮಂಡವಿಗೆ ಲಾಯದ ಭದ್ರಭವನಗಳು || ೧೯

ಕರೆಸಿದನು ಕೀಲಾರಿಗಳನಾ
ದರಿಸಿ ಹಟ್ಟಿಯ ತುಱುಗಳೆಲ್ಲವ
ಬರಿಸಿ ನೋಡಿದನಲ್ಲಿ ಹಿಂಡಿನ ಕೋಟಿ ಸಂಖ್ಯೆಗಳ
ಹರಿವ ಹಾಱುವ ಹಂತಿಸುವ ಸೈ
ವರಿವ ಮರಳುವ ಮುಱಿವ ಸಿಲುವೆಳೆ
ಗಱುಗಳನು ನೋಡಿದನು ನಗುತ ನರೇಂದ್ರನೊಲವಿನಲಿ ॥ ೨೦

ತರಿಸಿ ಹೋರಿಯ ಗವಿಯ ಗೂಳಿಯ
ಬರೆಸಿದನು ಕೆಲಕೆಲವ ಕೃಷಿಕರಿ
ಗಿರಿಸಿದನು ಗೋಲಕ್ಷವಿತ್ತನು ವಿಪ್ರಸಂಕುಲಕೆ
ಕರೆಸಿ ಕೊಟ್ಟನು ಭಟ್ಟರಿಗೆ ಮ
ಲ್ಲರಿಗೆ ಗಾಯಕರಿಗೆ ವಿಧಾವಂ
ತರಿಗೆ ಬಹು ವಿಧ ಬಹಳ ವಂದಿಗೆ ಮಾಗಧವ್ರಜಕೆ ॥ ೨೧

ಅರಸ ಕೇಳೈ ಕೌರವೇಶ್ವರ
ನರಸಿಯರು ಲೀಲೆಯಲಿ ಶತಸಾ
ವಿರ ಸಖೀಜನಸಹಿತ ಹೊಱವಂಟರು ವನಾಂತರಕೆ
ಸರಸಿಜದ ನಿಜಗಂಧಲೇಪದ
ಪರಿಮಳವ ತಕ್ಕೈಸಿ ಬನದಲಿ
ತರಳೆಯರು ತುಂಬಿದರು ಮಱಿದುಂಬಿಗಳ ಡೊಂಬಿಯಲಿ ॥ ೨೨

ನೇವುರದ ದನಿ ಧಟ್ಟೈಸಿತು ವೇ
ದಾವಳಿಯ ನಿರ್ಘೋಷವನು ನಾ
ನಾವಿಭೂಷಣಕಾಂತಿ ಕೆಣಕಿತು ಮುನಿಸಮಾಧಿಗಳ
ಆ ವಧೂಜನದಂಗಗಂಧ
ಪ್ರಾವರಣ ಹುತ ಚರು ಪುರೋಡಾ
ಶಾವಳಿಯ ಸೌರಭವ ಮುಸುಕಿತು ವನದ ವೇಧೆಯಲಿ ॥ ೨೩

ಸ್ರುಕ್ ಸ್ರುವವ ಮುಟ್ಟಿದರು ಧೌತಾಂ
ಶುಕದೊಳಗೆ ತಂಬುಲವ ಕಟ್ಟಿದ
ರಕಟುಪಾಧ್ಯರ ಮೋರೆಯನು ತೀಡಿಸುತ ಬೆರಳಿನಲಿ

ಚಕಿತ ಧೃತಿಯರು ದೀಕ್ಷಿತರ ಚಂ
ಡಿಕೆಗೆಳನು ತುಡುಕಿದರು ಮುನಿವಟು
ನಿಕರಶಿರದಲಿ ಕುಣಿಸಿದರು ಕುಂಚಿತ ಕರಾಂಗುಲಿಯ ‖ ೨೪

ಬಳಿಯಲೈದಿತು ಮುನಿಗಳಿವರುಪ
ಟಳವನಱಸಂಗಱುಹಿದರು ವೆ
ಗ್ಗಳಿಸಿ ಭೀಮಂಗೆಂದರರ್ಜುನ ಯಮಳರಿದಿರಿನಲಿ
ಉಳಿದರೆಮಗೀ ವನವಿಟಾಳ
ಪ್ರಳಯವಾದುದು ಕಾನನಾಂತರ
ನಿಳಯದಲಿ ನಿಲಿಸೆಂದು ನುಡಿದುದು ಸಕಲ ಮುನಿನಿಕರ ‖ ೨೫

ಅರಸಲಾ ಕುರುರಾಯನಾತನ
ಬರವು ತುಱುಪಳ್ಳಿಗಳ ಗೋವಿ
ಸ್ತರಣಕೋಸುಗವೈಸೆ ಪಾಳೆಯ ಸಾರ್ವಭೌಮನದು
ಪರಿಸರದೊಳಿದ್ದುದು ವಿನೋದಕೆ
ತರುಣಿಯರು ಬರಲೇಕೆ ನೀವ
ಬ್ಬರಿಸುವಿರಿ ನಮ್ಮವರಲಾ ಯೆಂದನು ಮಹೀಪಾಲ ‖ ೨೬

ಔಡುಗಚ್ಚಿದನಂಘ್ರಿಯಲಿ ನೆಲ
ಬೀಡಬಿಡಲೊದೆದನು ಕರಾಂಗುಲಿ
ಗೂಡಿ ಮುಱದೌಕಿದನು ಖತಿಯಲಿ ನಿಜಗದಾಯುಧವ
ನೋಡಿದನು ಕುರುರಾಯನಲಿ ಹೊ
ಯ್ದಾಡಿ ಬರಬೇಕೆಂಬ ಭೀಮನ
ಖೋಡಿಯನು ನೃಪನಱದು ಸಂತೈಸಿದನು ಸಾಮದಲಿ ‖ ೨೭

ಅರಸ ಕೇಳೈ ವಾರಿಕೇಳಿಗೆ
ಕುರುಪತಿಯ ನೇಮದಲಿ ಶತಸಾ
ವಿರ ಸರೋಜಾನನೆಯರೈದಿತು ವನವನಂಗಳಲಿ
ಪರಿಮಳದ ಪಸರಣದ ಪದ್ಮಾ
ಕರ ಸಹಸ್ರದ ಸಾಲ ಸುಮನೋ
ಹರ ಮಹೋದ್ಯಾನವನು ಕಂಡೈತಂದರಬಲೆಯರು ‖ ೨೮

ತವಗೆ ತಳಿ ಮುಳುವೇಲಿ ಬಾಗಿಲ
ಜವಳಿಗದ ಬೀಯಗದಲಿದ್ದುದು
ದಿವಿಜವನ ವುದ್ದಂಡತರ ಪರಿಮಳಪಯೋಧಿಯಲಿ
ಯುವತಿಯರ ದಳ ನೂಕಿತುದಕೋ
ತ್ಸವ ವೃಥಾಕೇಳಿಯಲಿ ಕನಕೋ
ದ್ಭವ ಕವಾಟವನೊಡೆದು ಕರೆದರು ಕಾಹಿನವರುಗಳ || ೨೯

ಆರಿವರು ಕರೆವವರೆನುತ ಸುರ
ವೀರರೌಕಿತು ಬಾಗಿಲಲಿ ನೀ
ವಾರೆನಲು ತೆಗೆ ಕದವನಜೀಯಾ ರಾಯನರಮನೆಯ
ವಾರನಾರಿಯರವನಿಪತಿಯ ಕು
ಮಾರರಿದೆ ಬೇಹವರು ಸರಸಿಯ
ವಾರಿಕೇಳಿಗೆ ಬಂದೆವೆಂದರು ಗಜಜಿ ಗರ್ಜಿಸುತ || ೩೦

ಹೊಗಬಹುದೆ ಗಂಧರ್ವರಾಯನ
ಮಗನ ಬನವಿದು ನೋಡಿದರೆ ದೃಗು
ಯುಗುಳದೆವೆ ಸೀವುದು ಕಣಾ ಫಡ ಹೋಗಿ ನೀವೆನಲು
ತೆಗೆ ವಿಕಾರವ ನಮ್ಮೊಡನೆ ತೆಗೆ
ತೆಗೆ ಕದವ ಗಂಧರ್ವನಾರಿಗೆ
ಮಗನದಾವವನೆನುತ್ತ ಹೊಕ್ಕುದು ತಳಿಯ ಮುಜಿದೊದೆದು || ೩೧

ಒರಲಿದವು ಕಹಳೆಗಳು ಕಾಹಿನ
ಸುರಭಟರು ನೆರೆದಸಿ ಮುಸುಂಡಿಯ
ಪರಶು ಮುದ್ಗರ ಚಾಪ ಮಾರ್ಗಣ ಸಬಳ ಸೂನೆಗೆಯ
ಹರಿಗೆ ಖಡ್ಗದಲರಿಭಟರ ಚ
ಪ್ಪರಿಸಿದರು ಗಾಂದರ್ವಭಟರಿಗೆ
ಕುರುಪತಿಯ ಸುಭಟರಿಗೆ ತೊಡಕಿತು ತೋಟ ತೋಪಿನಲಿ || ೩೨

ಚೆಲ್ಲಿದರು ಚಪಳೆಯರು ಮುಸಿಜನ
ವೆಲ್ಲ ಪಾಂಡವರಾಶ್ರಮದ ಮೊ
ಗ್ಗಲ್ಲ ಮೊನೆಗಣೆ ಮೊರೆದು ಮುಜಿದವು ಮೊನೆಯ ಮುಂಬಿಗರ

ಚೆಲ್ಲೆಗಂಗಳ ಚಪಳೆಯರ ನಾ
ನೆಲ್ಲಿ ಕಾಣೆನು ಕಾಮುಕರು ನಿಂ
ದಲ್ಲಿ ನಿಲ್ಲದೆ ಹಾಯ್ದುರವನೀಪತಿಯ ಪಾಳಯಕೆ || ೩೩

ಬಱಿಯ ಮಕ್ಕಳ ತಂಡವೇ ಹೊ
ಕ್ಕಱಿದುದವದಿರನುಱುಬಿ ದಿವಿಜರು
ಜಱಿದು ನೂಕಿತು ಬನವನೊಳಬಿದ್ದವರ ಹೊಱವಡಿಸಿ
ಮುಱಿದು ತಳಿಗಳ ಬಲಿದ ಬಾಗಿಲ
ಹೊಱಗೆ ನಿಂದರು ವಾರಿಕೇಳಿಯ
ಮಱೆದು ಶೋಣಿತವಾರಿಕೇಳಿಗೆ ಬನ್ನಿ ನೀವೆನುತ || ೩೪

ನೃಪಸುತರ ಪಡಿಬಲಕೆ ಬಂದುದು
ವಿಪುಳಬಲ ಹಲ್ಲಣಿಸಿ ಹೊಯ್ ಹೊ
ಯ್ಯಪಸದರ ಗಾಂಧರ್ವಸುಭಟರನೆನುತ ಸೂಟಿಯಲಿ
ಕುಪಿತರಱೆಯಟ್ಟಿದರು ತೋಪಿನ
ಕಪಿಗಳಾವೆಡೆ ಕಾಣಬಹುದೆಂ
ದುಪಚರಿತರೊಳಸರಿಯೆ ಹೊಗಿಸಿದರವರನಾ ವನವ || ೩೫

ಮುಱಿಯೆನುತ ಗಾಂಧರ್ವ ಬಲ ಮು
ಕ್ಕುಱಿಕಿ ತತ್ತ್ರಱಿದಱಿದು ತೋಪಿನ
ಹೊಱಗೆ ತರಹರವಿಲ್ಲೆನಿಸಿ ಹೊಗಿಸಿದರು ಪಾಳೆಯವ
ಹೊಱಗುಡಿಯ ಕೋಱಪಾಳಯದ ಭಟ
ರಱುಹಿದರು ಕುರುಪತಿಗೆ ಖತಿಯಲಿ
ಜಱಿದು ಜೋಡಿಸಿ ಬಿಟ್ಟನಕ್ಷೋಹಿಣಿಯ ನಾಯಕರ || ೩೬

ಹಲ್ಲಣಿಸಿದುದು ಚಾತುರಂಗವ
ದೆಲ್ಲ ಕವಿದುದು ಹೊಕ್ಕು ದಿವಿಜರ
ಚೆಲ್ಲಬಡಿದರು ಚಾಚಿದರು ತೋಪಿನ ಕವಾಟದಲಿ
ನಿಲ್ಲದೌಕಿದರಂತಕನ ಪುರ
ದೆಲ್ಲೆಯಲಿ ಹೆಕ್ಕಳದ ಖಡುಗದ
ಘಲ್ಲಣೆಯ ಖಣಿ ಖಟಲ ಗಾಢಿಕೆ ಘಲ್ಲಿಸಿತು ನಭವ || ೩೭

ಕದಡಿದುವು ಸರಸಿಗಳು ಕೆಡೆದುವು
ಕದಳಿಗಳು ಗೊನೆಸಹಿತ ಸೆಳೆದೊಱ
ಗಿದವು ಮುಂಡಿಗೆ ಮುಱಿದು ಮಿನುಗುವ ನಾಗವಳ್ಳಿಗಳು
ತುದಿಗೊನೆಯ ಚೆಂದೆಂಗು ಖರ್ಜೂ
ರದಲಿ ಕಾಣೆನು ಹುರುಳ ನಾರಂ
ಗದ ವಿರಾಮುವನೇನನೆಂಬೆನು ನಿಮಿಷಮಾತ್ರದಲಿ || ೩೮

ತೋಟ ಹುಡಿಹುಡಿಯಾಯ್ತು ಮುಱಿದುದು
ತೋಟಿಯಲಿ ನಮ್ಮವರು ಹಗೆಗಳ
ಘಾಟದವರಾಟಿಯಲಿ ದುರ್ಬಲ ನಮ್ಮದೀಟಿಯಲಿ
ಆಟವಿಕದಳ ಹೊಯ್ದು ಮಿಂಡರ
ಮೀಟನೆತ್ತಿದರವರು ಕಾಹಿನ
ಕೋಟಲೆಗೆ ನಾವೊಲ್ಲೆವೆಂದರು ಚಿತ್ರಸೇನಂಗೆ || ೩೯

ಅವರು ಮರ್ತ್ಯರು ನಮ್ಮದಕಟಾ
ದಿವಿಜರೀ ವಿಧಿಯಾದುದೇ ಕವಿ
ಕವಿ ಯೆನುತ ಬೇಹವರಿಗಿತ್ತನು ರಣಕೆ ಮೀಳೆಯುವ
ಗವಿಯ ಗರುವರು ಗಾಢಿಸಿತು ಮಾ
ನವರ ಮುರುಕಕೆ ಮುಱಿದುದೇ ಸುರ
ನಿವಹ ಸುಡಲಾಹವವನೆತುರುಬಿದರು ಮಂಗಡಿಸಿ || ೪೦

ಆರು ನಿಲುವರು ದೇವಲೋಕದ
ಧೀರರಲ್ಲಾ ವಿಗಡರೆಸುಗೆಯ
ಭೂರಿಬಾಣದ ಹಿಂಡು ತಱಿದವು ಹೊಗುವ ಗಂಡಿಗರ
ವಾರುವದ ಮುಖದಿರುಹಿದವು ಮದ
ವಾರಣಂಗಳು ಕೊಡಹಿದವು ಹೊಂ
ದೇರು ಮುಗ್ಗಿದವೊಗ್ಗು ಮುಱಿದುದು ಮಿಗುವಕಾಲಾಳ || ೪೧

ಕೇಳು ಜನಮೇಜಯ ಧರಿತ್ರೀ
ಪಾಲ ವನಪಾಲಕರ ಜಗಳದೊ
ಳಾಳು ನೊಂದುದು ಧರೆಗೆ ಬಿದ್ದುದು ತೋಟ ತೋಪಿನಲಿ

ಆಲಿಗಳ ಕಣ್ಣೋಟದೊಲಹಿಸ
ವೌಳಿವುಬ್ಬೆಯು ಸುಯಿಲ ದುಗುಡದ
ಜಾಳಿಗೆಯು ಜಡಮನದಲಿದ್ದನು ಕೌರವರ ರಾಯ || ೪೨

ನೇಮವಾಯಿತು ಸುಭಟರೊಳಗೆ ಸ
ನಾಮರೆದ್ದರು ಕರ್ಣ ಸೌಬಲ
ಭೂಮಿಪತಿಯನುಜಾತ ಬಾಹ್ಲಿಕ ಶಲ್ಯನಂದನರು
ಸೋಮದತ್ತನ ಸುತ ಕಳಿಂಗ ಸು
ಧಾಮ ಚಿತ್ರ ಮಹಾರಥಾದಿ ಮ
ಹಾಮಹಿಮರೊಗ್ಗಾಯ್ತು ಹಯ ಗಜ ರಥನಿಕಾಯದಲಿ || ೪೩

ಮತ್ತೆ ಮುಜಾದುದು ದೇವಬಲ ಬೆಂ
ಬತ್ತಿ ತಿವಿದರು ಕೌರವರ ಭಟ
ರೆತ್ತಿ ಹಾಯ್ಕಿದರದಟಗಾಂಧರ್ವರ ಭಟವ್ರಜವ
ತೆತ್ತಿಸಿದ ಸರಳೇಱ ಸುರಿಗರು
ಕೊತ್ತು ಕೈಗಳ ತಾಳಿಗೆಯ ತಲೆ
ಹೊತ್ತು ರಕುತದ ರಹಿಯಲೋಡಿತು ಸೇನೆ ಸುರಪುರಿಗೆ || ೪೪

ಹೊಯ್ಯಲಾದುದು ಚಿತ್ರಸೇನನ
ಬಯ್ಯಲೇತಕೆ ಬೇಱೆ ಘಾಯದ
ಮೈಯ್ಯ ಬಿಸುಟಾಯುಧವ ಬೆನ್ನಲಿ ಬಿಟ್ಟಮಂಡೆಗಳ
ಸುಯ್ಯಬಹಳದ ಭಟರು ತೊದಳಿಸು
ತೊಯ್ಯನೆಂದರು ಜೀಯ ಕರ್ಣನ
ಕೈಯ್ಯಲಮರರ ಜೀವವದೆ ಜಾಱುವುದು ನಯ ನಿಮಗೆ || ೪೫

ಕಳವಳಿಸದಿರಿ ಧನುವ ತಾ ಹೆ
ಬ್ಬಲವ ಕರೆ ಕರೆ ಹುಲುಮನುಷ್ಯರ
ಬಲುಹು ಗಡ ಬಯಲಾಯ್ತು ಗಡ ಗಾಂಧರ್ವರಾಟೋಪ
ನೆಲದೊಳೊಕ್ಕೊಡೆ ಶೋಣಿತಕೆ ಜಾ
ಟಳವ ಹಿಡಿ ಬರಹೇಳು ಶಾಕಿನಿ
ಕುಲವ ಡಾಕಿನಿಯರನು ನೆತ್ತರಗುಡುಹಿಗೈನೆಯರ || ೪೬

ಘಾಯವಡೆದರು ಕೆಲರು ನೆಲದಲಿ
ಲಾಯ ಸೇಡಿತು ಕೆಲಬರಿಗೆ ಪ್ರ
ರಾಯವೆಸುಗೆಯ ಹಸುಗೆಯಾದುದು ಭಟರು ದೆಸೆದೆಸೆಗೆ
ಆಯುಧದ ಮೊದೆಯೊಟ್ಟಿದವು ಕ
ರ್ಣಾಯತಾಸ್ತ್ರನ ಕೆಣಕಿ ಖೇಚರ
ರಾಯದಳ ನುಗ್ಗಾಯ್ತು ದೊರೆ ಹೊಕ್ಕನು ಮಹಾಹವವ ‖ ೪೭

ತೊಲಗಿ ಮರ್ತ್ಯರಿಗಿಸಿತು ದರ್ಪದ
ಸುಲಭತೆಯೆ ಘಡ ನಿಮಿಷ ಸೈರಿಸು
ಹುಲುಭಟರ ಹುರಿದೀ ಪ್ರತಾಪಾನಳನ ಸೆಗಳಿಯಲಿ
ಅಳುಕುವನೆ ಖಚರೇಂದ್ರ ಜಲಧರ
ನೆಲವೊ ತೋರಾ ಚಾಪವಿದ್ಯಾ
ಕಲೆಯನೆನ್ನೊಡನೆನುತ ಬೊಬ್ಬಿಱಿದೆಚ್ಚನಿನಸುತನ ‖ ೪೮

ಗಿಳಿಯ ಹಿಂಡಿನ ಮೇಲೆ ಗಿಡುಗನ
ಬಳಗ ಕವಿವಂದದಲಿ ಸೂಠಿಯ
ಲಳವಿಗೊಟ್ಟುದು ಚಾತುರಂಗದ ಚಿನಕಡಿಯ ಹರಹಿ
ಎಲೆ ಸುಯೋಧನ ಬೀಳು ಕೈದುವ
ನಿಳುಹಿ ಖೇಚರರಾಯನಂಘ್ರಿಯೊ
ಳೆಲವೊ ರವಿಸುತ ಹೋಗೆನುತ ಹೊಕ್ಕಿಱಿದರುರವಣಿಸಿ ‖ ೪೯

ಘಾಯವಡೆಯದರಿಲ್ಲ ಸಾಯದೆ
ನೋಯದವರಿಲ್ಲೆರಡು ಬಲದಲಿ
ಬೀಯವಾದುದು ಸುಭಟರೆನೆ ಗಾಂಧರ್ವಪತಿ ಮುಳಿದು
ರಾಯನನುಜರ ಕಟ್ಟಿದನು ದೀ
ರ್ಘಾಯುವನು ಹಿಡಿದನು ವಿಕರ್ಣನ
ನೋಯಲೆಚ್ಚನು ಕೆಡಱಿದನು ಕೌರವಚತುರ್ಬಲವ ‖ ೫೦

ಘಡಯೆನುತ ಕುರುರಾಯನೀತನ
ಪಡಿಮುಖಕೆ ನೂಕಿದನು ಜೋಡಿಸಿ
ಜಡಿವ ನಿಸ್ಸಾಳಾಯತದ ಕಹಳೆಗಳ ಕಳಕಳದ

ಬಿಡುರಥದ ಘಟ್ಟಣೆಯ ಧಾಳಿಯು
ಕಡುಗುದುರೆಗಳ ನೆತ್ತಿಯಂಕುಶ
ದೆಡೆಯ ಘಟೆಯಾನೆಗಳ ದಳ ಸಂದಣಿಸಿತೊಗ್ಗಿನಲಿ || ೫೧

ಮೀಟಿನಿಸಿಪ ಗಾಂಧರ್ವರೊಂದೇ
ಕೋಟಿ ಕವಿದುದು ಕುರುಬಲಕೆ ಪಡಿ
ಗೋಟೆಯಾದುದು ನೃಪತಿ ಸಿಕ್ಕಿದನವರ ವೇಢೆಯಲಿ
ದಾಟಿತರಸನ ಧೈರ್ಯ ಕೈದುಗ
ಳಾಟ ನಿಂದುವು ಕರದ ಹೊಯಿಲಲಿ
ನೋಟಕರು ಘೊಳ್ಳೆಂದುದಿತ್ತಲು ಪಾಂಡವರ ಬನದ || ೫೨

ಅರರೆ ದೊರೆ ದೊರೆ ದೊಂಬಿನಲಿ ಡಾ
ವರಿಸುವರ ಹೊಯಿ ಹೊಯ್ಯೆನುತ ಖೇ
ಚರರ ಕಂಬಿಗಳಾಡಿದುವು ಸುತ್ತಲು ಸುಯೋಧನನ
ಅರಸರಂಜದಿರಂಜದಿರಿ ಯೆನು
ತುರವಣಿಸಿ ಕೌರವನರೇಂದ್ರನ
ಕರದ ಕೈದುವನೀಸಿಕೊಂಡನು ಖಚರಪತಿ ನಗುತ || ೫೩

ಹಯದ ಪಡಿವಾಘೆಯಲಿ ಬಾಹು
ದ್ವಯವ ಬಿಗಿದನು ತನ್ನ ರಥದಲಿ
ನಯವಿಹೀನನನಿರಿಸಿದನು ಕುರುರಾಯವಲ್ಲಭನ
ಭಯಭರಿತ ದುಶ್ಶ್ಯಾಸನನ ದು
ರ್ಜಯನ ಚಿತ್ರಾಂಗದ ವಿಕರ್ಣನ
ನಯವಿದೂರರ ತುಂದರಿಪ್ಪತ್ತೈದು ಸಹಭವರ || ೫೪

ಇಳಿದು ಗಜವನು ಕೈದುಗಳ ಕೆಳ
ಗಿಳುಹಿ ಜೋದರು ವಾರುವದಿನಿಳೆ
ಗಿಳಿದು ರಾವುತರು ಹಾಯ್ಕಿದರು ದೂಹತ್ತಿಲೌಡಿಗಳ
ಬಿಲುಸರಳ್ಗಳ ಬಿಸುಟು ರಥಿಕರು
ನೆಲಕೆ ಹಾಯ್ದರು ಹೊತ್ತ ಕೈದುವ
ನಿಳುಹಿ ಪಯದಳ ಬೀಳುಕೊಂಡುದು ಖೇಚರೇಶ್ವರನ || ೫೫

ಮುಟ್ಟಿದಿರಿ ಪರಿವಾರ ಕೈದುವ
ಕೊಟ್ಟು ಹೋಗಲಿ ದೊರೆಗಳಾದರ
ಬಿಟ್ಟವರಿಗಮರೇಂದ್ರನಾಣೆಯೆನುತ್ತ ಸಾರಿದರು
ಕೆಟ್ಟುದಿದು ಕುರುಪತಿಯ ದಳ ಜಗ
ಜಟ್ಟಿಗಳು ಕರ್ಣಾದಿಗಳು ಮುಸು
ಕಿಟ್ಟು ಜಾರಿತು ಕಂಡ ದೆಸೆಯಲಿ ಭೂಪ ಕೇಳೆಂದ || ೫೬

ಕುದುರೆ ಹಾಯ್ದವು ಕಂಡ ಮುಖದಲಿ
ಮದಗಜಾವಳಿವೋಡಿದವು ವರ
ಸುದತಿಯರು ಬಾಯ್ಬಿಡುತ ಹರಿದರು ಬಿಟ್ಟ ಮಂಡೆಯಲಿ
ಕದಡಿದುದು ಜನಜಲಧಿ ಝೂಳಿಸಿ
ಕೆದರಿದುವು ಕೇರಿಗಳು ರಾಯನ
ಹದನವೇನೆಂದೆನುತ ಹರಿದರು ಹರದರಗಲದಲಿ ೫೭

ಕುರುಪತಿಯ ದುಶ್ಶಾಸನಾದಿಗ
ಳರಸಿಯರು ಚೌಪಟದೊಳೊದರಿದ
ರರಸನುಪಹತಿಗೊಪ್ಪುಗೊಟ್ಟರೆ ಕರ್ಣ ಶಕುನಿಗಳು
ಗುರುನದೀಸುತರಿದ್ದರೀ ಪರಿ
ಪರಿಭವಕೆ ಪಾಡಹುದೆ ಪಾಂಡವ
ರರಸನಿಹ ವನವಾವುದೆಂದೊರಲಿದಳು ಭಾನುಮತಿ || ೫೮

ಅರಸಿಯರು ಸಖಿಯರು ಕುಮಾರಿಯ
ರರಸನನುಜರ ಹೆಂಡಿರನಿಬರು
ವೆರಸಿ ಬಂದಳು ಭಾನುಮತಿ ಯಮತನುಜನಾಶ್ರಮಕೆ
ಕರುಣಿ ರಕ್ಷಿಸು ಸೋಮವಂಶೋ
ದ್ಧರಣ ರಕ್ಷಿಸು ಸತ್ಯ ಧರ್ಮದ
ಸಿರಿಯೆ ರಕ್ಷಿಸುಯೆನುತ ಧೊಪ್ಪನೆ ಕೆಡದಳಂಘ್ರಿಯಲಿ || ೫೯

ನಾದಿದಳು ನೃಪನಂಘ್ರಿಯನು ನಯ
ನೋದಕದ ಧಾರೆಯಲಿ ಭಾಳವ
ತೇದು ತಿಲಕದ ಗಂಧದಲಿ ಬೈತಲೆಯ ಮುತ್ತುಗಳ

ಆದರಿಸಿ ನವಕುಸುಮದಲಿ ಘನ
ರೋದನರ್ಥ್ವಸಿ ಮಂತ್ರದಲಿ ನೃಪ
ಪಾದಪೂಜೆಯ ರಚಿಸುವವೊಲೊಪ್ಪಿದಳು ಭಾನುಮತಿ || ೬೦

ಖಳರು ಕೌರವರಿಂದು ಸಜ್ಜನ
ಕುಲಶಿರೋಮಣಿ ನೀನು ಕರುಣಾ
ಜಲಧಿ ನಿನಗಪರಾಧಿಗಳು ನಾವಹೆವು ಜಗವರಿಯೆ
ಹುಳಿಗೆ ಹಾಲಳುಕುವಡೆ ಹಾಲಿನ
ಜಲಧಿ ಕೆಡುವುದೆ ಜೀಯ ನಿನ್ನವ
ರೆಳಸಿಕೊಂಡರು ಕಾಯಬೇಕೆಂದೊಱಲಿದಳು ತರಳೆ || ೬೧

ರಾಯರಿಗೆ ಬಿನ್ನಹವ ಮಾಡೌ
ತಾಯೆ ದುರುಪದಿದೇವಿಯೇ ಹಿರಿ
ದಾಯಸಂಬಡಿಸದಿರು ಕುರುಪತಿ ನಿನ್ನ ಮೈದುನರು
ನೋಯಿಸಲು ಸಿರಿ ಗಂಧ ನಿಜಗುಣ
ದಾಯತವ ಬಿಡಬಲ್ಲುದೇ ನೀ
ಕಾಯಬೇಹುದು ಪತಿಯನೆಂದೊಱಲಿದಳು ಭಾನುಮತಿ || ೬೨

ಚುಂಬಿಸಿತು ಕಡುಶೋಕ ಮಿಡಿದನು
ಕಂಬನಿಯನುಗುರಿನಲಿ ಘನ ಕರು
ಣಾಂಬುನಿಧಿ ನೀಗುರಿಸೆ ಮೈಗೂಡಿಱದ ರೋಮದಲಿ
ಹಂಬಲಿಸಬೇಡಕಟ ಕುರುಪತಿ
ಯೆಂಬನಾರೌ ಬೊಪ್ಪನವರೇ
ನೆಂಬರೇಳೌ ತಾಯೆಯೆನುತೆತ್ತಿದನು ಭಾಮಿನಿಯ || ೬೩

ಭೀಮ ಬಾ ಕುರುರಾಯಕುಲ ಚೂ
ಡಾಮಣಿಯ ತಾ ಹೋಗು ಕದನೋ
ದ್ದಾಮದರ್ಜುನ ತಾ ನಿಜಾನ್ವಯಕುಮುದ ಚಂದ್ರಮನ
ತಾ ಮನೋವ್ಯಥೆ ಬೇಡ ನೃಪಚಿಂ
ತಾಮಣಿಯ ತಾ ಹೋಗೆನಲು ಕರ
ತಾಮರಸವನು ಮುಗಿದು ಬಿನ್ನಹ ಮಾಡಿದನು ಭೀಮ || ೬೪

ತಮ್ಮ ಸಂಕಟಕಿವರು ವಿನಯದ
ನೆಮ್ಮ ಬಿನ್ನಹ ಮಾಡುತಿರ್ದರೆ
ನಿಮ್ಮಡಿಗೆ ಪರಿತೋಷವೇ ಕರ್ತವ್ಯ ವಿಷಯದಲಿ
ಎಮ್ಮ ಮನ ಮುಂಚುವುದು ಕಾರ್ಯದ
ಹಮ್ಮುಗೆಯ ನೀವರಿಯಿರೇ ತಮ
ತಮ್ಮ ದುಷ್ಕೃತ ತಮಗೆ ಫಲಿಸಿದರೇನು ನಿಮಗೆಂದ || ೬೫

ಭರತವಂಶದೊಳವರ ಭಂಗವೆ
ನಿರುತ ನಮ್ಮದು ನಮ್ಮ ಭಂಗ
ಸ್ಫುರಣವವರದು ತಾವರಿಯರಾವಱವೆಡೆ ಹದನ
ಪರರ ಕಲಹಕೆ ನಾವು ನೂಱೈ
ವರುಗಳಂತಃಕಲಹಕದು ನೂ
ರ್ವರು ವಿಚಾರಿಸಲೈವರಾವೆಂದನು ಮಹೀಪಾಲ || ೬೬

ಎಣಿಸಲೇಕಿನ್ನದನು ಕೌರವ
ಜನ ಮರಳಿ ಬಂದಲ್ಲದಾರೋ
ಗಣೆಯ ಮಾಡೆನು ಪಾರ್ಥ ನೀನುಡಿ ನಿನ್ನ ಹವಣೇನು
ರಣದೊಳಹಿತರ ಮುರಿದು ಕುರುಧಾ
ರುಣಿಪತಿಯ ತಹುದುಂಟೆಯೆನೆ ಬಿಲು
ಗಣೆಗಳನು ತಿದ್ದಿದನು ಫಲುಗುಣ ಹೂಡಿದನು ರಥವ || ೬೭

ಎಮಗೆ ನುಡಿ ಬೇಱುಂಟೆ ನೀತಿ
ಭ್ರಮಿತರಾವಲ್ಲನಿಲಸುತನು
ಭ್ರಮಿತನವ ಸೈರಿಸುವುದೈ ಕಾರುಣ್ಯನಿಧಿ ನೀನು
ನಿಮಿಷದಲಿ ಗಾಂಧರ್ವಕನನಾ
ಕ್ರಮಿಸಿ ಕೌರವಗಣವ ನಿಜಪದ
ಕಮಲದಡಿದಿರಲಿ ಕೆಡಹಿ ತೋಱುವೆನೆನುತ ಹೊಱವಂಟ || ೬೮

ಮುರಿದು ಚೆಲ್ಲಿದ ಸಕಲ ಕುರುಬಲ
ನೆರೆದುದರ್ಜುನನೊಡನೆ ನೂಟಿಯ
ಲರಿಭಟನ ಬೆಂಬತ್ತಿದನು ಫಡ ನಿಲ್ಲು ನಿಲ್ಲೆನುತ

ಸೆಱೆಯ ಬಿಡು ಗಾಂಧರ್ವಲೋಕವ
ನುರುಹುವೆನು ಹಿಂದಿಕ್ಕಿ ಕೊಂಬನ
ಶಿರವ ಸೆಂಡಾಡುವೆನೆನುತ ಕವಿದೆಚ್ಚನಾ ಪಾರ್ಥ || ೬೯

ಸರಳಿನುಬ್ಬೆಗೆ ಸೆಡೆದು ಸಮರಕೆ
ತಿರಿಗಿ ನಿಂದುದು ಖಚರಬಲವು
ಬ್ಬರದ ಬೊಬ್ಬೆಯುಲುಱುಬಿದರು ಶರಹತಿಗೆ ಸೈರಿಸುತ
ಉರುಳಿದವು ಗಾಂಧರ್ವಶಿರ ನಭ
ಸರಳಮಯ ದಿಗುಜಾಲವಂಬಿನ
ಹೊರಳಿಯಲಿ ಹೊದಿಸಿದುದೆನಲು ಕವಿದೆಚ್ಚನಾ ಪಾರ್ಥ || ೭೦

ಅಳವಿಯಲಿ ಕೈಮಾಡಿ ಖೇಚರ
ರಳಲಿಗರು ಮುಮ್ಮುಳಿತವಾಯಿತು
ಬೆಳಗಿದುವು ದಿವ್ಯಾಸ್ತ್ರಧಾರೆಗಳಖಿಳ ದಿಗುತಟವ
ತಳಪಟದೊಳೀ ಸೆರೆಸಹಿತ ಕೈ
ಚಳಕದಲಿ ತೆಗೆದೆಸುತ ಸಮರಕೆ
ಮಲೆತು ನಿಂದನು ಚಿತ್ರಸೇನನು ಪಾರ್ಥನಿದಿರಿನಲಿ || ೭೧

ಬಿಡು ಸೆಱೆಯನವಗಡೆಯುತನವೆ
ಮೊಮ್ಮಡನೆ ಸಲ್ಲದು ಸೂಳೆಯುರ ಸುರೆ
ಗುಡಿಹಿಗಳ ಸರವಾದಿಗಳ ಸೇರುವೆಯುಲೊಪ್ಪುವುದು
ಫಡಯೆನುತ ನಾರಾಚದಲಿ ಬಲ
ನೆಡನ ಕೀಲಿಸಿ ಪಿಂಗಡೆಯ ಮುಂ
ಗುಡಿಯ ಕಟ್ಟಿದನಂಬಿನಲಿ ಖಚರಾಧಿಪನ ರಥವ || ೭೨

ಎಲವೊ ಕೌರವಸಹಿತ ಕಮಠನ
ಕೆಳಗೆ ಧ್ರುವನಿಂ ಮೇಲೆ ಹೊಕ್ಕಡೆ
ಕೊಲುವೆನಲ್ಲದೆ ಕಾವೆನೇ ಫಡ ನಿಲ್ಲು ನಿಲ್ಲೆನುತ
ತುಳುಕಿದನು ಕೆಂಗೋಲನಿನಮಂ
ಡಲಕೆ ದಿಗ್ಭ್ರಮೆಯಾಯ್ತು ನಭದಲಿ
ಸುಳಿವ ಸುರರ ವಿಮಾನತತಿ ಚೆಲ್ಲಿದವು ದೆಸೆದೆಸೆಗೆ || ೭೩

ತಿರುಗಿ ನಿಂದನು ಖಚರಪತಿ ನಿ
ಷ್ಠುರವಿದೇಕೈ ಪಾರ್ಥ ನೀ ಕಡು
ಮರುಳೊ ಮೂಢನೊ ಶೌರ್ಯಪಿತ್ತನೊ ಭ್ರಮಿತವಿಹ್ವಳನೋ
ಧುರದ ಕೌತುಕಗರಳ ಮೂರ್ಛಾಂ
ತರಿತಹೃದಯನೊ ನಿಲ್ಲು ಚಾಪದ
ಶರವನುಪಸಂಹರಿಸು ನನ್ನಯ ಮಾತ ಕೇಳೆಂದ || ೭೪

ಹುಲಿಯ ಮುಱಿಯೊತ್ತಿದರೆ ಪಶುಸಂ
ಕುಲಕೆ ಸಂಕಟವೇನು ವಾಯಸ
ಕುಲವ ಕೈಮಾಡಿದರೆ ಕೋಟಲೆಯೇಕೆ ಕೋಗಿಲೆಗೆ
ಖಳರ ಖೊಪ್ಪರಿಸಿದರೆ ಸುಜನರ
ತಲೆಗೆ ವೇದನೆಯೇನು ಕೌರವ
ಕುಲವ ಕಟ್ಟಿದರೇನು ಜಠರದ ಶೂಲೆ ನಿನಗೆಂದ || ೭೫

ಹೋದ ಮಾರಿಯ ಕರೆದು ಮನೆಯೊಳ
ಗಾದರಿಸಿದವರುಂಟೆ ನೀರಲಿ
ನಾದ ಕೆಂಡವನುರುಹಿ ಮುಡಿವರೆ ಮತ್ತೆ ಮಂಡೆಯಲಿ
ಕೈದು ಮುಱಿದರೆ ಹಗೆಗೆ ತನ್ನಯ
ಕೈದುಗೊಟ್ಟವರುಂಟೆ ಕುರುಪತಿ
ತೀದಡೀತನ ಕರದುಕೊಂಬುದು ಲೇಸು ಲೇಸೆಂದ || ೭೬

ಧರ್ಮವಾಗಲಿ ಮೇಣು ಜಗದಲ
ಧರ್ಮವಾಗಲಿ ರಾಜಮಂತ್ರದ
ಧರ್ಮವಾಗಲಿ ನೀತಿಬಾಹಿರವಾಗಲದು ಮೇಣು
ಧರ್ಮಪುತ್ರನ ಬೆಸನು ವೈದಿಕ
ಧರ್ಮ ನಮಗದು ರಾಜಮಂತ್ರದ
ನಿರ್ಮಳನ ಮಾತೆಮಗೆ ಬೇಱೊಂದಿಲ್ಲ ಮತವೆಂದ || ೭೭

ಕೋಲ ಬಱಿದೇ ಬೀಯ ಮಾಡದಿ
ರೇಳು ಫಲುಗುಣ ಮರಳು ನೀ ದಿಟ
ಕೇಳುವರೆ ನಾನಿವನ ಕಟ್ಟಿದೆನಿಂದ್ರನಾಜ್ಞೆಯಲಿ

ಪಾಲಿಸಾ ನಿಮ್ಮಯ್ಯ ಬೆಸಸಿದ
ನೇಳಿಸುವುದೇಕೆನಲು ಕೆಂಗಲಿ
ಗೋಲದೂಗುತ ಪಾರ್ಥ ನುಡಿದನು ಚಿತ್ರಸೇನಂಗೆ || ೭೮

ಕುರುಪತಿಯು ಕಟ್ಟುವರೆ ಸುರಪತಿ
ಕರೆದು ಬೆಸಸಿದ ನಿನಗೆ ನಮಗೆ
ಮ್ಮರಸ ನೇಮವ ಕೊಟ್ಟನೀ ಕುರುಪತಿಯು ಬಿಡಿಸೆಂದು
ಸುರಪತಿಗೆ ಕೃತಕಾರ್ಯ ನೀನಾ
ಗಿರಲು ನಾವಕೃತಾರ್ಥರಾಗಿಯೆ
ಮುರಳಿ ಜನಪನ ಕಾಬೆವೈಸಲೆ ಜಾಣನಹೆಯೆಂದ || ೭೯

ಬಿಡುವೆಯಾವರೆ ನೃಪನ ಸೆಱೆಗಳ
ಬಿಡಿಸುವೆನು ಮೋಣಲ್ಲದಿರ್ದರೆ
ಬಿಡಿಸುವೆನು ನಿನ್ನುಸುರ ಸೆಱೆಯನು ನಿನ್ನದೇಹದಲಿ
ನುಡಿಗೆ ತೆಱಹಿಲ್ಲೆನುತ ಮಿಗೆ ಕೈ
ಗಡೆಯನೆಚ್ಚನು ಕಾಳಕೂಟದ
ಕಡಲು ಕವಿವಂದದಲಿ ದುವ್ವಾಳಿಸಿದವಂಬುಗಳು || ೮೦

ಕಡಿದನರ್ಜುನನಂಬ ನೀನವ
ಗಡಿಸಲೇಕ್ಕೆ ಮುರುಳೆ ಕೆಂಡವ
ಮುಡಿಲೊಳಿಕ್ಕುವುದರ್ಥಿಯೋ ಸಂಧಾನ ನಿಮಗೆಮಗೆ
ಬಿಡುವೆನಿನಿಬರ ಸೆಱೆಗಳನು ನಡೆ ನಿ
ಮ್ಮೊಡೆಯನಲ್ಲಿಗೆ ಕೊಂಡುಬಹೆನೆಂ
ದೊಡನೆ ಬಂದನು ಧರ್ಮಪುತ್ರನ ಬಳಿಗೆ ಖಚರೇಂದ್ರ || ೮೧

## ೮. ಈ ಶರೀರವ ನೂಕಿ ನಿಲುವೆನು ಮುಕ್ತಿರಾಜ್ಯದಲಿ

ಕೇಳು ಜನಮೇಜಯ ಧರಿತ್ರೀ
ಪಾಲ ಕೌರವನೃಪನ ತಂದು ಕೃ
ಪಾಳುವಿನ ಚರಣಾಗ್ರದಲಿ ಕೆಡಹಿದನು ಕಲಿಪಾರ್ಥ

ತೋಳ ಹಿಂಗಟ್ಟುಗಳ ಮೋಱೆಯು
ಕಾಳಿಕೆಯು ಬಿಡುದಲೆಯು ನೀರೊಗು
ವಾಲಿಗಳ ಕುರುರಾಯನಿದ್ದನು ತಮ್ಮದಿರು ಸಹಿತ || ೧

ಕೊಳ್ಳಿ ಸೆಱೆಯಿದೆ ನಿಮ್ಮ ಸಹಭವ
ರೆಲ್ಲರುಂ ಕಡುಮೂರ್ಖರಿದು ನಿ
ಮ್ಮೆಲ್ಲರಿಗೆ ಮತವೈಸಲೆ ನಾವೆಂದು ಫಲವೇನು
ಖುಲ್ಲರಿವದಿರ ಬಿಡಿಸಿದಕೆ ತಳು
ವಿಲ್ಲದಹುದಪಘಾತ ಸಾಕಿ
ನ್ನೆಲ್ಲಿಯದು ನಯ ಬೀಳುಕೊಡಿ ತನಗೆಂದನಾ ಖಚರ || ೨

ಮಾನಭಂಗವೆ ಬರಲಿ ಮೇಣಭಿ
ಮಾನವಾಲಿಂಗಿಸಲಿ ಕರುಣದೊ
ಳಾನತರ ಪಾಲಿಸುವುದೇ ಕ್ಷತ್ರಿಯರ ಮಾರ್ಗವಿದು
ನೀನೆ ಬಾಂದವನೆಮಗೆನುತ ಸ
ನ್ಮಾನದಲಿ ಕಳುಹಿದನು ಬಳಿಕು
ದ್ಯಾನದಲಿ ದೇವೇಂದ್ರನೆತ್ತಿದನಳಿದ ಖೇಚರರ || ೩

ಕಳುಹಿದನು ಖೇಚರನನವನಿಪ
ತಿಲಕನೀತನ ನೋಡಿದನು ನಿಜ
ಲಲನೆಯನು ಕರೆದನು ಸುಯೋಧನ ನೊಂದನಕಟೆನುತ
ನಳಿನಮುಖಿ ಹೆಡಗೈಯ್ಯ ಬಿಡು ಕಲು
ನೆಲನು ಹಾಸಿಕೆ ಹಂಸತಲ್ಪದ
ಪಳುಕಿನಲಿ ಪವಡಿಸುವಗೀ ವಿಧಿಯೇ ಮಹಾದೇವ || ೪

ಬಂದಳಬುಜಾನನೆ ಸುಯೋಧನ
ನಂದವನು ನೋಡಿದಳು ಸುಯಿದಳು
ಬೆಂದ ವಿಧಿ ಬಂಧನವ ತಂದುದೆ ಸಾರ್ವಭೌಮರಿಗೆ
ಒಂದು ಕೈ ಗಲ್ಲದಲಿ ಬಿಡಿಸಿದ
ಳೊಂದು ಕೈಯ್ಯಲಿ ತೋಳಪಾಶವ
ನಿಂದುಮುಖಿ ದುರ್ಯೋಧನನ ದುಶ್ಶಾಸನನಸಹಿತ || ೫

ಕೆಳದಿಯರ ಕೈಯಿಂದ ಕೊಯಿಸಿದ
ಳುಳಿದ ಕೌರವನನುಜವರ್ಗದೆ
ಬಲುಹುರಿಯು ನೇಣುಗಳನವದಿರ ಗೋಣ ಕೊಯಿವಂತೆ
ಅಳಲಿಸಿದನೇ ಖಚರನಾತನ
ಕೊಲಿಸಬೇಹುದು ಕಳುಹಿ ಕಷ್ಟವ
ಬಳಸಿದನು ಭೂಪಾಲನೆಂದಳು ಕಮಲಮುಖಿ ನಗುತ || ೬

ಅರಸ ನೊಂದೈ ಮರ್ದನಕೆ ಮ
ಲ್ಲರುಗಳಿಲ್ಲೆಮಗೊತ್ತುವುವು ಕಲು
ಹರಳು ಮಜ್ಜನ ಭೋಗಿಸುವರೆ ಶೀತಾಂಬು ತಿಳಿಗೊಳನು
ಹರಿಣ ಶಾರ್ದೂಲಾದಿ ಚರ್ಮಾಂ
ಬರವೆ ಸಮಕಟ್ಟೆಮಗೆ ರತ್ನಾ
ಭರಣವೇ ರುದ್ರಾಕ್ಷಿಯೆಂದಳು ನಗುತ ನಳಿನಾಕ್ಷಿ || ೭

ಮಾಸಿಸಿಯ ಕಟಕಿಯ ಮಹಾಸ್ತ್ರಕೆ
ಮೌನವನೆ ಮಱೆಗೊಂಡು ಕಲುಷ
ಧ್ಯಾನಸಿದ್ಧನು ಚಿತ್ತದಲಿ ಬೇಱೊಂದ ಚಿಂತಿಸುತ
ಭಾನುಮತಿ ಕೈಮುಗಿದಳೀ ಕ
ರ್ಣಾನುಗತ ತಾಟಂಕಮುದ್ರೆಯ
ನೀನೆಲೈ ದಯೆಗೈದೆ ಯೆಂದೆಱಗಿದಳು ಚರಣದಲಿ || ೮

ಎತ್ತಿದನು ರಾಣಿಯನು ನೃಪ ತಲೆ
ಗುತ್ತಲೇಕೈ ನಿನಗೆ ಬಂದ ವಿ
ಪತ್ತು ನಮ್ಮದು ನಮ್ಮತೊಡಕಿನ ತೋಟಗಳು ನಿಮಗೆ
ಹೆತ್ತತಾಯ್ ಗಾಂಧಾರಿ ಸತಿ ನಾ
ವಿತ್ತಡಿಗಳಕಟಕಟ ನೀ ದು
ಶ್ಚಿತ್ತನಹೆಯೇಕೆಂದು ನುಡಿದನು ನೃಪತಿ ಕೌರವನ || ೯

ಬಿಡಿಸಿದಧರದ್ವಯ ವಿಷಾದದ
ತಡಿಯ ಚಿತ್ತದ ನೆಯ್ಗೆ ಬೇಱೊಂ
ದೆಡೆಯಲಿದ್ದುದು ಬೀಳುಕೊಂಡನು ಧರ್ಮನಂದನನ

ಒಡನೆ ಬಂದರು ರಾಣಿಯರು ಕೈ
ಗುಡಿಯವರ ಸುದ್ದಿಯಲಿ ನೂಸಿದ
ಪಡೆಯು ನಿಮಿಷಕೆ ನೆರೆದುದಿನಸುತ ಸೌಬಲರು ಸಹಿತ || ೧೦

ಭಟರ ಬೊಬ್ಬೆಗಳಡಗಿದವು ಬಾಯ್
ತುಟಿಗಳಾಡವು ವಂದಿನಿಕರಕೆ
ಪಟಹ ಪಣವ ಮೃದಂಗವಿದ್ದುವು ಮೌನದೀಕ್ಷೆಯಲಿ
ಚಟುಳಹಯ ರಥ ಗಜದವರು ಲಟ
ಕಟಿಸದಿರ್ದುದು ಕೌರವೇಂದ್ರನ
ಕಟಕ ದುಮ್ಮಾನದಲಿ ಬಂದುದು ಹಸ್ತಿನಾಪುರಕೆ || ೧೧

ಹೊಗಲಿ ಪಾಳೆಯ ಪುರವನೆಂದು
ಬ್ಬೆಗದ ಬೆಳೆ ಸಿರಿವಂತನೆತ್ತಿದ
ದುಗುಡದಲಿ ಕುಳ್ಳಿರ್ದನಾ ಸುರನದಿಯ ತೀರದಲಿ
ಹೊಗುವ ಮೋಹಿತೆಯ ನೆಲಕೆ ನೆಟ್ಟಾ
ಲಿಗಳ ನಿಖಿಳೇಂದ್ರಿಯದ ರೋಚಕ
ಬಿಗಿಯೆ ಬೇಗೆಯ ಬೇಸಜಿನ ಬಿಸುಗುದಿಯ ಸುಯ್ಲಿನಲಿ || ೧೨

ತರಿಸಿ ಗಂಗಾಜಲವ ಗೋಮಯ
ವೆರಸಿ ಕುಶಸಮ್ಮಾರ್ಜನೆಯ ವಿ
ಸ್ತರಿಸಿ ಪರಿಕರ ಶುದ್ಧಿಯಲಿ ಪಸರಿಸಿದ ಬರ್ಹಿಯಲಿ
ನಿರಶನವ್ರತವೆಂದು ಮಂತ್ರೋ
ಚ್ಚರಿತ ಸಂಕಲ್ಪದಲಿ ಕೌರವ
ರರಸ ಪವಡಿಸಿದನು ಕೃತಪ್ರಾಯೋಪವೇಶದಲಿ || ೧೩

ಹೊಗಿಸಬೇಡಾರುವನು ಕರ್ಣಾ
ದಿಗಳ ಮೊದಲಾಗೆಂದು ದಸ್ತಿಯ
ನುಗುಳುಗಂಡಿಯ ಕಾಹ ಕೊಟ್ಟನು ತನ್ನ ಬೇಹವರ
ದುಗುಡದಲಿ ಪರಿವಾರ ಬಂದೋ
ಲಗಿಸಿ ಹೊರಗೇ ಹೋಗುತಿರ್ದುದು
ನಗುತ ಹೊಕ್ಕಳು ಭಾನುಮತಿ ಕಂಚುಕಿಯ ಕೆಡೆಯೊದೆದು || ೧೪

ಏನು ದಿಟ ಸಂಕಲ್ಪವಿನಿತಕೆ
ತಾನು ಹೊಱಗೇ ಹೊಗುವೆವೇಳು ಕೃ
ಶಾನುವನು ಬೀಳುವರೆ ನಡೆ ಭಾಗೀರಥಿಯ ಮಡುವ
ಮಾನನಿಧಿಯೇ ವಿವಿಧ ಗರಳ ವಿ
ತಾನವಿದೆ ತರಿಸುವೆನೆ ನಿಶ್ಚಯ
ವೇನು ಮನದನುಮಾನವನು ಹೇಳೆಂದಳಿಂದುಮುಖಿ || ೧೫

ತರುಣಿ ನೀ ಹೆಸರಿಸಿದವಿವು ದು
ರ್ಮರಣ ಸಾಧನವಮಲ ದರ್ಭಾ
ಸ್ತರಣವಿದು ಪಾವನವಲಾ ಪ್ರಾಯೋಪವೇಶದಲಿ
ಪರಿಹರಿಸುವೆನು ದೇಹವನು ಸುಡ
ಲರಸುತನವನು ಪಾಂಡುಪುತ್ರರ
ಕರುಣಕಲುಷಿತ ಕಾಯವಿದನಾದರಿಸುವೆನೆಯೆಂದ || ೧೬

ಈ ನಿರಾಹಾರವು ನಿರರ್ಥಕ
ವೇನನೆಂಬೆನು ಜೀಯ ಮುಱಿದಭಿ
ಮಾನ ಬೆಸುವುದೆ ಬಣ್ಣವಿಡುವುದೆ ಬಂದ ದುರ್ಯಶವು
ಆ ನದೀಜ ದ್ರೋಣರೆಂದುದ
ನೀನುಪೇಕ್ಷಿಸಿ ಕಳೆವೆ ಹೆಂಗುಸು
ನೀನಱಿಯೆಯೆನಬೇಡ ಚಿತ್ತೈಸೊಂದು ಬಿನ್ನಹವ || ೧೭

ತಮ್ಮ ನೆಱೆವೊಟ್ಟೈಸಿ ರಣದಲಿ
ನಿಮ್ಮ ಬಿಡಿಸಿದರವರು ನೀವಿ
ನ್ನೆಮ್ಮ ಹಿಂದಣ ಗುಣವ ನೋಡದಿರೆಂದು ಯಮಸುತನ
ನಮ್ಮ ನಗರಿಗೆ ಕರೆಸಿ ಧರೆಯನು
ತಮ್ಮ ಪಟ್ಟಣಸಹಿತ ಕೊಟ್ಟರೆ
ನಿಮ್ಮಡಿಗಳನು ಲೋಕ ಮೆಚ್ಚುವುದೆಂದಳಿಂದುಮುಖಿ || ೧೮

ನುಡಿದವಧಿ ಹದಿಮೂಱು ವರುಷದ
ಹೆಡೆತಲೆಯನೊದೆದೆದ್ದು ನಿಮ್ಮೀ
ಪೊಡವಿಯರ್ಧಕೆ ಬಲೆಯ ಹಾಯ್ಕದೆ ಬಿಡುವರೆ ಬಳಿಕ

ನುಡಿಯು ಸಲಿಸದ ಮುನ್ನ ಕೊಟ್ಟರೆ
ಕಡು ಕೃತಘ್ನತೆ ತಪ್ಪುವುದು ಮಿಗೆ
ನುಡಿಯಲಮ್ಮೆನು ರಾಜಕಾರ್ಯವನೆಂದಳಿಂದುಮುಖಿ ॥ ೧೯

ಮಱೆವ ಹಗೆಯೇ ನಾವು ಮಾಡಿದ
ನಱಿಯಲಾ ಮೂದಲಿಸಿ ಮರ್ಮವ
ನಿಱಿವ ಸುರಗಿಕಣಾ ಸದಾ ಪಾಂಚಾಲೆ ಪವನಜರು
ಮಱುಗಲೇತಕೆ ಭಾನುಮತಿ ನಿ
ನ್ನಱುವ ಮಗನಲಿ ರಾಜ್ಯಲಕ್ಷ್ಮಿಯು
ಹೊಱಿಸಿ ಬದುಕುವುದೆನ್ನ ಕಾಡದೆ ಹೋಗು ನೀನೆಂದ ॥ ೨೦

ಬಂದಳಾ ಗಾಂಧಾರಿ ಸೊಸೆಯರ
ವೃಂದಸಹಿತುರವಣಿಸಿ ಹೊಕ್ಕಳು
ನಿಂದು ನೋಡಿದಳಾತನಿರವನು ಕುಶೆಯ ಹೊದಱಿನಲಿ
ಕಂದಿದಳು ಕಡುಶೋಕಶಿಖಿಯಲಿ
ಬೆಂದೆನೇಳ್ಳೈ ಮಗನೆ ಹಾಸಿಕೆ
ಯಿಂದ ಲೇಸಾಯ್ತೆನುತ ಕುಳ್ಳಿರ್ದ್ದಳು ಸಮೀಪದಲಿ ॥ ೨೧

ಏನು ದರ್ಭಾಸ್ತ್ರರಣಶಯನವಿ
ದೇನು ಕಾರಣ ನಿರಶನವು ವ್ರತ
ವೇನ ಸಾಧಿಸಲಾವುದೀ ಪ್ರಾಯೋಪವೇಶದಲಿ
ಏನು ಸಿದ್ಧಿಯಿದಕ್ಕೆ ಮೋಹಿದ
ಮೌನಮುದ್ರೆಯ ಬಿಡಿಸಿ ಹೇಳೆ
ನ್ನಾಣೆಯೆಂದಳು ಹಣೆಯ ಹಣೆಯಲಿ ಬಾಚಿದಳು ಮಗನ ॥ ೨೨

ತಾಯೆ ಹೇಳುವುದೇನು ಪಾಂಡವ
ರಾಯರುಳುಹಿದ ಒಡಲನಿನ್ನಿದ
ಱಾಯಸವ ನಾನೇನ ಹೇಳುವೆ ಹೊಱಗೆ ಕೇಳುವುದು
ನೋಯಲೇತಕೆ ನಿಮಗೆ ಮಕ್ಕಳು
ತಾಯೆ ನೂಱುಂಟನಿಬರಲಿ ಕುಂ
ದಾಯಿತೊಂದೈಸಲೆ ಮನೋವ್ಯಥೆಯೇಕೆ ನಿಮಗೆಂದ ॥ ೨೩

ಮಾಡಿದೆನು ಸಂಕಲ್ಪವಿದಱಲಿ
ಗೂಡ ಕಳಚುವೆನೊಮ್ಮೆ ನೀವೇ
ನೋಡಿ ಸಂತಸಬಡುವುದಾ ದುಶ್ಶಾಸನಾದಿಗಳ
ಕೇಡುಗನು ಕುರುವಂಶಕೆಂದಿಳೆ
ಯಾಡುವುದು ತನ್ನೊಬ್ಬನನು ತಾ
ಮಾಡಿದೆನು ನೆಱೆ ಮುಳುಗಿದರೆ ಕುಲಕೆಲ್ಲ ಲೇಸೆಂದ || ೨೪

ಆ ಸಮಯದಲಿ ವಿಗತನಯನ ಮ
ಹೀಶ ಬಂದನು ಜನಪದದ ವಿ
ನ್ಯಾಸದುಗ್ಗಡಣೆಯಲಿ ವಿದುರನ ಹೆಗಲ ತೋಳಿನಲಿ
ಆಸಱಿನ ಬೇಗುದಿಯ ಚಿಂತೆಯ
ಬೇಸಱಿನ ಬಿಸುಸುಯಿಲ ರಾಣೀ
ವಾಸಕುಲವಿದಿರೆದ್ದುದಖಿಳಾಭರಣರಭಸದಲಿ || ೨೫

ಸಾಕು ಮಗನೆ ದುರಂತ ಚಿಂತೆಯಿ
ದೇಕೆ ಸಂಕಲ್ಪಾಭಿಯೋಗ
ವ್ಯಾಕುಲತೆ ಬೇಡೇಳು ಪಾಲಿಸು ಸಕಲ ಭೂತಳವ
ಆ ಕುಮಾರರ ಕರೆಸಿ ಗುಣದಲಿ
ಸಾಕುವುದು ಜೀವೋಪಕಾರಕೆ
ಕಾಕ ನೆನೆಯದಿರೆಂದು ಮುಂಡಾಡಿದನು ಕೌರವನ || ೨೬

ಸವೆದು ಹೋಯ್ತಾಯುಷ್ಯ ತನಗಿ
ನ್ನವನಿಯಾಗದು ಮಱೆಯುಧಿಷ್ಠಿರ
ಪವನಜರು ನಿನಗನ್ಯರೇ ಕರೆಸುವುದು ರಾಜ್ಯದಲಿ
ಅವರುಗಳ ನಿಲಿಸುವುದು ನೆಲನ
ರ್ಧವನು ದುಶ್ಶಾಸನಗೆ ಕೊಡುವುದು
ನಿವಗೆ ಚಿತ್ರಕೆ ಬಹಡೆಯೆಂದನು ತಂದೆಗವನೀಶ || ೨೭

ಆವರವರಂತಿರಲಿ ನಿಮಗಿ
ನ್ನೀ ದುರಾಗ್ರಹ ಬೇಡ ನಿನ್ನಳಿ
ವಾದಡೀ ಕುರುವಂಶವುಳಿಯದು ಪಟ್ಟವಾತನಲಿ

ಬೀದಿಗಲಹದೊಳೊಮ್ಮೆ ಸ್ವೈರಸರ
ವಾದೊಡದು ಪರಿಹರಿಸಿದವರೇ
ಸೋದರರಲಾ ಹೆಚ್ಚು ಕುಂದೇನೆಂದನಂಧನೃಪ || ೨೮

ಕಲಹ ಬೀದಿಯೊಳಾಯ್ತು ಖೇಚರ
ರಲಿ ವಿನೋದದಲಹಿತರಡಹಾಯ್ದ
ದುಳುಹಿ ತಂದನು ಪಾರ್ಥನೆಮ್ಮಯ ತೋಳ ನೇಣುಗಳ
ನಳಿನಮುಖಿ ಕಡು ಮೌಳಿಯಲಿ ಮೂ
ದಲಿಸಿ ಕೊಯ್ದಳು ತನ್ನ ಭಂಗದ
ಲುಳಿವುವೆತ್ತಣ ಮಾತು ಕರುಣಿಸಿ ಬೊಪ್ಪನವರೆಂದ || ೨೯

ದೋಷ ನಿಮಗಿಲ್ಲೆಮ್ಮ ಮೇಲಭಿ
ಲಾಷೆಯನು ಬಿಡಿ ನಿಮ್ಮ ಮಗ ಕುಲ
ಭೂಷಣನಲಾ ಧರ್ಮಸುತನಾತನೊಳು ಹುರುಡಿಸುವ
ದೋಷವುಂಟೇ ತನಗೆ ನಿಮಗಿದು
ಭೂಷಣವು ತಾನಲ್ಲ ನಾನಾ
ಘೋಷಿಸುವೆನೈ ಧರ್ಮಸುತನರಸಾಗಬೇಕೆಂದು || ೩೦

ಮುನಿಸಿನಲಿ ಧೃತರಾಷ್ಟ್ರ ತನ್ನರ
ಮನೆಗೆ ತಿರುಗಿದನಿತ್ತ ನಾರೀ
ನಿವಹವೆಲ್ಲವ ಬೀಳುಕೊಟ್ಟನು ಬೈದು ಖಾತಿಯಲಿ
ಮನಮುಖಿಗಿ ಕಾತರಿಸಿ ಗಂಗಾ
ತನುಜ ಗುರುಜ ದ್ರೋಣ ಗೌತಮ
ರನುಚಿತಪ್ರಾರಂಭಭೀತರು ಬಂದರೊಗ್ಗಿನಲಿ || ೩೧

ರಾಯನಿಹ ಹದನೇನು ನಿದ್ರಾ
ನಾಯಕಿಯ ಮೇಳದಲಿ ಐದನೆ
ಜೀಯಯೆನಲೊಳಹೊಕ್ಕು ನಿಂದರು ನೃಪಸಮೀಪದಲಿ
ಆಯಿತೇ ನಾವೆಂದ ನುಡಿಯದು
ಹೋಯಿತೇ ಹೊಳ್ಳಾಗಿ ದೇಹದ
ಬೀಯಕಿದು ಸಂಕಲ್ಪ ಗಡ ಹೇಳೆಂದನಾ ಭೀಷ್ಮ || ೩೨

ಈಸು ದಿನ ಸಾಮ್ರಾಜ್ಯಸೌಖ್ಯವಿ
ಳಾಸದಲಿ ಬಳಸಿದೆನು ಸಾಕಿ
ನ್ನೀ ಶರೀರವ ನೂಕಿ ನಿಲುವೆನು ಮುಕ್ತಿರಾಜ್ಯದಲಿ
ಆಶೆಯವನಿಯೊಳಿಲ್ಲ ವಿಷಯಾ
ಭ್ಯಾಸಿಗೊಮ್ಮೆ ವಿರಕ್ತಿದೆಸೆಯಹು
ದೈಸಲೇ ಗುರು ನೀವು ಬೆಸಸಿರೆಯೆಂದನಾ ಭೂಪ ‖ ೩೩

ಎಮ್ಮ ನುಡಿಗಳಪಥ್ಯವಾದರೆ
ನಿಮ್ಮ ಕರ್ಣಾದಿಗಳ ಕರೆಸುವು
ದೆಮ್ಮ ನುಡಿಗವರೆಂದ ಮಾತನುಸಾರಿಯೆನಿಸಿದಡೆ
ಒಮ್ಮೆ ಕೈಕೊಂಬುದು ವೃಥಾ ನೃಪ
ಧರ್ಮವನು ಬಿಡಬೇಡ ಸಮರವ
ನೆಮ್ಮ ಸಾವುದು ಗರುವಗೆ ಗುಣವೆಂದನಾ ಭೀಷ್ಮ ‖ ೩೪

ಕದನವಾರಿಗೆ ಪಾಂಡುಸುತರಲಿ
ಕದನಮಾಡುವುದುಚಿತವೇ ನಮ
ಗಿದುರು ಬಳಿಕಾರುಂಟು ಭಾರತವರುಷ ಭೂಮಿಯಲಿ
ಇದನಜಿದು ಸಂಕಲ್ಪಭಂಗಾ
ಸ್ಪದವ ಮಾಡುವದೊಳ್ಳಿತೇ ನಿಜ
ಸದನಕಭಿಮುಖರಾಗಿ ಕರುಣಿಪುದೆಂದನಾ ಭೂಪ ‖ ೩೫

ಪರಿಜನದೊಳವರವರ ಮುಖ್ಯರ
ಕರೆಸಿದನು ದುಶ್ಯಾಸನನು ನಿಮ
ಗರಸು ನೃಪನೀತಿಯಲಿ ಪಾಲಿಸುವನು ಮಹೀತಳವ
ಧರೆಯನಾತಂಗಿತ್ತೆವೆಮಗೀ
ಸುರನದಿಯ ತೀರದಲಿ ಸರ್ವೇ
ಶ್ವರನ ಸನ್ನಿಧಿಯಿರವು ಘಟಿಸುವುದೆಂದನಾ ಭೂಪ ‖ ೩೬

ರಾಯನೀ ಪರಿ ನುಡಿದು ಜನಸಮು
ದಾಯವನು ಕಳುಹಿದನು ಸೂನೋ
ಪಾಯ ಸಾಪೇಕ್ಷೆಯ ಸಮಾಧಿಯಲಿರಲು ರಾತ್ರಿಯಲಿ

ದಾಯವಿದು ತಮಗೆಂದು ದೈತ್ಯ ನಿ
ಕಾಯ ಬಂದು ರಸಾತಳಕೆ ಕುರು
ರಾಯನನು ಕೊಂಡೊಯ್ದು ತಿಳುಹಿದರವರು ಸಾಮದಲಿ || ३८

ಅರಸ ನೀ ಪ್ರಾಯೋಪವೇಶದಿ
ಮರಣದೀಕ್ಷಿತನಾದೆ ಗಡ ನೀ
ಮರುಳಲಾ ನಾವಿರುತಿರಲು ನಿನಗೇತಕೀ ಚಿಂತೆ
ಸುರರು ಪಾಂಡುಕುಮಾರರಾಗವ
ತರಿಸಿವರು ಗೆಲವವದಿರಿಗೆ ನಾ
ವಿರಲು ಸುಡಲೀ ದೈತ್ಯಜನ್ಮವನೆಂದರಾ ಖಳರು || ३೮

ಸಾಯದಿರು ನಿನಗಿಂದು ಮೊದಲು ಸ
ಹಾಯವಾವಂಜದಿರು ರಿಪುಕೌಂ
ತೇಯರಿಗೆ ಕೊಡಬೇಡ ನೀನು ತಿಲಾಂಶಭೂತಳವ
ಲಾಯಸಹಿತೀ ಗಜ ರಥಾಶ್ವನಿ
ಕಾಯ ನಿನ್ನದು ದೈತ್ಯ ಸಚಿವ ಪ
ಸಾಯಿತರು ನಿನ್ನವರು ನಾವೆವು ನಿಮ್ಮ ಸಮರದಲಿ || ३೯

ಎಂದು ಭೂಪನ ತಿಳುಹಿ ಕಳುಹಲು
ಬಂದು ಮರಳಿ ಮಹೀತಳಕೆ ತ
ನ್ನಿಂದುವದನೆಯ ಮಾತಿನಲಿ ನಿಂದಾತ ತಾನಾಗಿ
ಬಂದನರಮನೆಗಾಗಿ ಜನವಾ
ನಂದರಸದಲಿ ಮುಳುಗಿ ಪುರದಲಿ
ಸಂದಣಿಸಿದುವು ಗುಡಿಗಳೊಸಗೆಯ ಲಳಿಯ ಲಗ್ಗೆಯಲಿ || ४०

## ೯. ತನಗುತ್ತರವನಿತ್ತುದುಕವನು ಕುಡಿ

ಹಿಂಗಿದವು ಹನ್ನೊಂದುವರೆ ವರು
ಷಂಗಳಟವೀತಟದೊಳಿರಲಜು
ದಿಂಗಳೊಳಗೊಂದಾದುದಾಪತ್ತಾ ಮಹೀಶಂಗೆ

ತುಂಗವಿಕ್ರಮನಾ ಮುನೀಶನ
ಸಂಗತಿಯ ಸೊಗಸಿನಲಿ ಬಹು ದಿವ
ಸಂಗಳನು ನೂಕಿದನು ನೃಪತಿ ಪಲಾಶಶಾಲೆಯಲಿ || ೧

ವಿಮಳ ವಾನಪ್ರಸ್ಥಜನದಾ
ಶ್ರಮದೊಳಗೆ ಸಾರಂಗಮೃಗವಿಳೆ
ಯಮರನೌಪಾಸನದ ಸಾಧನದರಣಿಯನು ಕೊಂಡು
ಕಮಲಸಖನುದಯದಲಿ ಸಂಧ್ಯಾ
ರಮಣಿಗಭಿವಂದನೆಗೆ ಸನ್ಮುನಿ
ಸಮಿತಿ ಹಿಂಗಿದ ಹಿಂದೆ ಕೊಂಡೋಡಿತ್ತು ವಿಪಿನದಲಿ || ೨

ಎಲೆಲೆ ಮೃಗವರಣಿಯನು ವಂಚಿಸಿ
ಕಳೆದುದೋ ಕಾಳಾಯ್ತೆನುತ ತ
ಲ್ಲಳಿಸಿದಳು ನಿಜಪತಿಯ ಭಯದಲಿ ಮುನಿಯ ವಧುವಂದು
ಹೊಳೆಯ ಸಂಜೆಯ ಸಾಧುಗಳು
ಕಳವಳಿಸಲಾ ದ್ವಿಜನಱಿದು ಪಾರ್ಥಿವ
ರಿಳೆಯ ಬಿಟ್ಟರಲಾಯೆನುತ ಹರಿತಂದನಾಶ್ರಮಕೆ || ೩

ಎಲೆ ಯುಧಿಷ್ಠಿರ ದೋಷವಿದು ನಿ
ನ್ನಳವಿಗೈದುವುದರಣಿಯನು ಮೃಗ
ವೆಳೆದುಕೊಂಡುದು ಹೊದಱ ಹೊಕ್ಕುದು ಬಹಳ ಕಾನನದ
ಅಳಿದುದನ್ವಾಧಾನ ವಿಪ್ರರ
ಹಳಿವಿಗಾನೊಳಗಾದೆನೆನೆ ದ್ವಿಜ
ತಿಲಕನೌಪದ್ರವವನಱಿದವನೀಶ ಹೊಱವಂಟ || ೪

ಜಾಳಿಸಿದ ಹದವಿಲ್ಲು ಮುಮ್ಮೊನೆ
ಬೋಳೆಗಳ ನಿಡುಗುಂಡುಗಳ ಒಡಿ
ಕೋಲುಗಳ ಕೈಕಣ್ಣೆಗಳ ಪಾರಿಯುದ ಕುಪ್ಪುಸವ
ಮೇಳವಿಸಿ ಹೊಱವಂಟನವನೀ
ಪಾಲ ಬೇಂಟೆಗೆ ಮೃಗದ ಹೆಜ್ಜೆಯ
ಮೇಲೆ ಹಜ್ಜೆಯ ಹತ್ತಿಸಿದ ತನ್ನನುಜರೊಡಗೂಡಿ || ೫

ಕೇಳು ಜನಮೇಜಯ ಹಿಮಾಂಶು ವಿ
ಶಾಲವಂಶಜರಡವಿಯಲಿ ಮುನಿ
ಪಾಲನರಣಿಯನೊಯ್ದ ಮೃಗವನು ಹಿಡಿದರೊಳಬಿದ್ದು
ಮೇಲೆ ತೋಱಿತು ಥಗೆ ಮಹೀಶರ
ತಾಳಿಗೆಗಳೊಣಗಿದವು ಬಳಲಿಕೆ
ಯೇಳಿಗೆಯಲಾಸನ್ನ ಲತೆಯಿಱುಬಿನಲಿ ಮಲಗಿದರು || ೬

ದೂರವಾದುದು ನಿಳಯವೀ ಕಾಂ
ತಾರ ನಿರ್ಜಲವೈದಲಂಘ್ರಿಗೆ
ಭಾರ ಪದವಿನ್ನೇನು ಹದನೆಂದರಸನಳವಳಿದು
ನೀರ ತಾರೈ ಹೋಗು ನಕುಲ ಸ
ರೋರುಹದ ಪತ್ರದಲಿ ಪೊಟ್ಟಣ
ವಾರಿಯನು ಕಟ್ಟೆಂದು ಕುಂತೀಸೂನು ನೇಮಿಸಿದ || ೭

ಬಗೆದನೇ ಬಳಲಿಕೆಯನತಿಸಹ
ಸಿಗಳ ದೇವನು ಹಿರಿಯನಾಜ್ಞೆಯ
ನುಗುಳಲಮ್ಮದೆ ಧನುವ ಕೊಂಡನು ನಡೆದನತಿ ಪಥವ
ದೃಗುಮನೋಮಂಜುಳದ ಕಂಜಾ
ಳಿಗಳ ಕಡುಪರಿಮಳದ ಪಸರದ
ಸೊಗಸು ಮಿಗೆ ತೀಡಿತ್ತು ಪದ್ಮಾಕರದ ಪವಮಾನ || ೮

ಇರವಿನಲಿ ವಚನದಲಿ ಮಧುರ
ಸ್ವರವನೇ ಬೀಱುತ್ತಲಂತಃ
ಕರಣದಲಿ ಕತ್ತರಿಸಿಕೊಂಡಿಹ ಕುಜನದಂದದಲಿ
ಪರಿಮಳದ ಪಸರದಲಿ ಶೈತ್ಯೋ
ತ್ಕರುಷೆಯಲಿ ಲೇಸೆನಿಸಿ ಕುಡಿದರೆ
ಹರಣವನು ಹಿಂಗಿಸುವ ಸರಸಿಯ ವಾರಿ ಚೆಲುವಾಯ್ತು || ೯

ಇಳಿದು ಮೊನೆ ಮುಂಜೆಱಗನಗ್ರಕೆ
ಛಲಿದು ಹೊಕ್ಕನು ಜಾನುದಘ್ನ
ಸ್ಥಳವನಂಜುಳಿಯಿಂದ ತೊಳೆದನು ಚರಣ ವದನವನು

ತುಳುಕಿದನು ವಾರಿಯನು ತನ್ನಯ
ಬಳಲಿಕೆಯ ಪರಿಹರಿಸಿ ಭೂಪತಿ
ಗಳಿಗೆ ಬಳಿಕಾನೊಯ್ವೆನೆಂದನು ಮಾನಿಸಿದನಂದು || ೧೦

ಜಲವನಂಜುಳಿಯಿಂದ ಮೊಗದೀಂ
ಟಲು ನೆನೆಯಲಭ್ರದಲಿ ಗುಹ್ಯಕ
ನುಲಿದನೆಲೆ ನಕುಲಾಂಕ ಮಾಣೆನಗುತ್ತರವ ರಚಿಸಿ
ಬಳಿಕ ಸಲಿಲವನೀಂಟು ಮಾತುಗ
ಳೊಳವು ಮರುಳಾಗದಿರೆನಲು ಢಗೆ
ಗಳುಕಿ ಬಳಲಿಸೆ ಮೇಲನಾಲಿಸಿ ಮೀಱಿದನು ನುಡಿಯ || ೧೧

ಜಡಿಯಲೆರಡಳ್ಳೆಗಳು ಕೊಳದಲಿ
ಕುಡಿದನುದಕವನಬುಜದೆಲೆಯಲಿ
ಹಿಡಿದನನಿಬರಿಗಮಲಜಲವನು ಮುಗುಳೆ ನಿಮಿಷದಲಿ
ತಡಿಯನಡರಿದು ಧೊಪ್ಪನವನಿಗೆ
ಕೆಡೆದು ಪರವಶನಾದನಿತ್ತಲು
ತಡೆದನವನೆಂದಟ್ಟಿದನು ಸಹದೇವನನು ನೃಪತಿ || ೧೨

ತವಕದಲಿ ನಡೆತಂದು ವೈಮಱಿ
ದವನ ಕಂಡನು ಬಹಳ ಢಗೆ ಪರಿ
ಭವಿಸಲುದಕವ ಕುಡಿದು ಬಳಿಕಾರೈವೆನಿದನೆನುತ
ಲವಲವಿಸಿ ತಾಳಿಗೆಯ ತಲ್ಲಣ
ದವನು ಹೊಕ್ಕನು ಕೊಳನನಮಳಾಂ
ಬುವನು ಮೊಗೆದನು ಮುಖಕೆ ಮೋಹಲು ಮೇಲೆ ದನಿಯಾಯ್ತು ೧೩

ಬಿಡು ಬಿಡೆಲೆ ಸಹದೇವ ತನ್ನಯ
ನುಡಿಗೆ ಮಾಱುತ್ತರವ ಕೊಡು ಸೈ
ಗೆಡದೆ ಮುಂದಣ ನಿನ್ನವನ ಕಂಡಿಂತು ಮರುಳಹರೆ
ಮಡಿಯಲೆಳಸದಿರೆನಲು ಢಗೆಯುವ
ಗಡಿಸೆ ಸೈರಿಸಲಾಱದುತ್ತರ
ಗೊಡದೆ ಜಲವೀಂಟದನು ದಾಂಟಿದವಸು ಕಳೇವರವ || ೧೪

ಈತನುಱಿ ವೈಮುಱಿದನಿತ್ತಲು
ಕಾತರಿಸಿದನು ಭೂಪನಿಬ್ಬರ
ಮಾತು ಮೊಗದಿರುಹಿತ್ತು ಶಿಶುಗಳಿಗಾವ ಹದನಾಯ್ತೊ
ತಾತ ಹೋಗೈ ಪಾರ್ಥ ಬಾಲಕ
ರೇತಕತ್ತಲು ತಡೆದರೆಂಬುದ
ನೀ ತಿಳಿದು ತಾ ಜಲವನೆನೆ ಕೈಕೊಂಡು ನಡೆತಂದ || ೧೫

ಹಿಮದ ಗಾಳಿಯು ಪಥಪಿಡಿದು ಮ
ಧ್ಯಮದ ಪಾಂಡವ ನಡೆತರಲು ಮುಂ
ದಮಲ ಸರಸಿಯ ತೀರದಲಿ ಕೀಲಿಸಿದ ಮಗ್ಗುಲಲಿ
ಯಮಳರೊಱಗಿರೆ ಕಂಡು ಮನದಲಿ
ತಮವ ಹಿಡಿದನು ನೀರಗುಡಿದೀ
ಮಮತೆ ಮಿಗಲಾರೈವೆನೆಂದಿಳಿದನು ಸರೋವರವ || ೧೬

ಚರಣ ವದನವ ತೊಳೆದು ಢಗೆ ಡಾ
ವರಿಸಲಕ್ಷಮನಾಗಿ ಕರದಲಿ
ತೆಱೆಗಳನು ಬಿಡೆ ನೂಕಿ ಮೊಗೆದನು ಗರಳಮಯ ಜಲವ
ಮರುಳೆ ನೀ ಕೌಂತೇಯ ಮಾದ್ರೇ
ಯರನು ನೋಡುವುದಿತ್ತ **ತನಗು**
**ತ್ತರವನಿತ್ತುದಕವನು ಕುಡಿ**ಯೆಂದುದು ನಭೋನಿನದ || ೧೭

ಮೇಲನಾರೈವನೆ ಸುತೃಷ್ಣಾ
ಲೋಲ ಚಿತ್ತನು ಕಾಮಿನೀ ಮೃಗ
ಕೇಳಿಲಂಪಟನರ್ಥಲಾಭ ದ್ಯೂತಲೋಲುಪನು
ಕೇಳು ಜನಮೇಜಯ ತಟಾಕದ
ಕಾಳಕೂಟವನೀಂಟಿ ತಡಿಯಲಿ
ಕಾಲಿಡುತ ಡೆಂಢಣಿಸಿ ವೈಮಱಿದವರ ಕೂಡಿದನು ೧೮

ಮಡಿದರಿತ್ತಲು ಮೂವರನುಜರು
ತಡೆದರೇನು ವಿಚಿತ್ರವಾಯಿತು
ನಡೆ ಸಮೀರಕುಮಾರ ನೀಹೋಗತ್ತಲಡಗದಿರು

ತಡೆಯದೈತಹುದೆನೆ ಹಸಾದವ
ನುಡಿವುತವನೈದಿದನು ಹೆಜ್ಜೆಯ
ಹಿಡಿದು ಬಳಿಸಲಿಸಿದನು ಬರೆ ಬರೆ ಕಂಡನದ್ಭುತವ || ೧೯

ಥಟ್ಟುಗೆಡೆದಸುಗಳೆದ ತನ್ನೊಡ
ಹುಟ್ಟಿದರನೀಕ್ಷಿಸಿದನುಸುರಿಸ
ಬಟ್ಟೆಯನು ನೋಡಿದನು ಮೂಗಿನ ಬೆರಳ ಬೆಱಗಿನಲಿ
ಮುಟ್ಟಿತಿವರಿಗೆ ಮರಣವಿನ್ನೇ
ನಟ್ಟಿ ಕೊಲುವೆನು ಜವನ ಮೃತ್ಯುವ
ನಿಟ್ಟೆಲುವನುದುರಿಸುವೆನೆನುತೊದಱಿದನು ಕಲಿಭೀಮ || ೨೦

ಮನ್ನಣೆಗೆ ಹಿರಿಯೈಯ್ಯನೆಂದಾ
ನಿನ್ನು ಬಗೆವೆನೆ ಜವನ ಗಂಟಲ
ಮುನ್ನ ತಿರುಹುವೆನೆನುತ ಕಿಡಿಕಿಡಿಯಾದ ಖಾತಿಯಲಿ
ಇನ್ನೊದಱ ಫಲವೇನು ಕುಡಿವೆನು
ಮುನ್ನಲುದಕವ ಬಳಿಕನೋಡುವೆ
ನೆನ್ನವರ ಮಾರ್ಗವನೆನುತ ಮೊಗೆದೆನು ವಿಷೋದಕವ || ೨೧

ಮಾಣು ಮಾಱುತ್ತರವ ಕೊಡು ಮುಂ
ಗಾಣಬೇಹುದು ತಂದೆ ತನಗೀ
ಕ್ಷೋಣಿಯಲಿ ಪೂರ್ವದ ಪರಿಗ್ರಹವೀ ಸರೋವರವು
ಜಾಣನಾದರೆ ಜಾಱಬಿಡು ಬಗೆ
ಕೇಣವನು ಮಾಣೆನಲು ಗಗನದ
ವಾಣಿಯನು ಮನ್ನಿಸವೆ ಮಾರುತಿಯೀಂಟಿದನು ಜಲವ || ೨೨

ದಡದಡಿಸಿ ಕೊಳನಿಂದ ಹೊಱಗಡಿ
ಯಿಡುತ ಬಳಲಿದನನಿಲಸುತನವ
ರೊಡನೆ ಮೈಯಿಕ್ಕಿದನು ಕಳಚಿದ ನೀಲಗಿರಿಯಂತೆ
ಅಡಿಗೆಡೆದನಾ ಭೀಮನಿತ್ತಲು
ಕಡು ನಿರೋಧವ ಹಿಡಿದು ತಾನೇ
ನಡೆದು ಬಂದನು ಧರ್ಮಸುತನಾ ಕೊಳನ ಪಥವಿಡಿದು || ೨೩

ಮೇಲೆ ಮರಳ್ದಾಲಿಗಳ ಚಾಚಿಪ
ತೋಳ ಮೇಲಣ ತಲೆಯ ಸುಯ್ಲಿನ
ಲೀಲೆಯಡಗಿದ ಮುಖದ ಮುಸುಳಿದ ಕಾಯಕಾಂತಿಗಳ
ಮೇಲು ಮುಸುಕಿನ ಮುಗ್ಗುಲಲ್ಲಿಹ
ನಾಲುವರನೀಕ್ಷಿಸಿದ ಭೂಪತಿ
ಕೋಲು ಮಱುಮೊನೆಗೊಂಡವೊಲು ಮಱುಗಿದನು ಚಿತ್ತದಲಿ || ೨೪

ಮುಸುಕನರೆದೆಱೆದವರವರ ಮುಖ
ದುಸುರುಗಳನಾರೈದನಕಟಾ
ಶಿಶುಗಳಿಗೆ ಕಡುಹಾನಿಯಾಯಿತು ಶಿವಶಿವಾಯೆನುತ
ನಿಶಿತಶಸ್ತ್ರದ ಗಾಯವಿಲ್ಲು
ಬ್ಬಸದ ಸಾವಿನ್ನಾವುದೋ ತಾ
ನಸುಗಳೆಯದೇಕುಳಿದೆನೆಂದವನೀಶ ಚಿಂತಿಸಿದ || ೨೫

ಇಂದಿನಲಿ ಕಡೆಯಾಯ್ತಲಾ ವಿಮ
ಲೇಂದು ವಂಶಕೆ ಕೌರವನ ಛಲ
ಸಂದುದಿಂದಹಿತಾವನೀಶರಿಗಾಯ್ತು ಪರಿತೋಷ
ಕೊಂದರಾರೋ ಶಿಶುಗಳನು ಅರ
ವಿಂದನಾಭನ ಕೃಪೆಗೆ ಬಾಹಿರ
ನಿಂದು ತಾನಾದೆನು ಮಹಾದೇವೆನುತ ಬಿಸುಸುಯ್ದ || ೨೬

ತೊಱೆದಿರೇ ತಮ್ಮದಿರ ತನ್ನನು
ಮಱೆದಿರೇ ಸುಕುಮಾರರಿರ ವೈ
ಮಱೆದಿರೇ ತಾ ಮಾಡಿದವಗುಣದಖಿಳದಾಯಸವ
ನೆಱೆಯ ತಾಳುತ ನಿಮ್ಮ ಮನ ಬೇ
ಸಱಿಕೆಯಾದುದೆ ಆವ ತೆರದಿಂ
ದುಱುವ ಪ್ರಾಣವ ತೊಱೆದಿರೆಂದನು ದೆಸೆಗೆ ಬಾಯ್ವಿಡುತ || ೨೭

ಎಂದು ದೆಸೆದೆಸೆಗಳಿಗೆ ಬಾಯ್ವಿಡು
ತಂದು ನಾನಾ ತೆರದಿ ನಿಜಗುಣ
ವೃಂದವನು ಹೆಲುಬಿದನು ತಮ್ಮದಿರಿರವನೀಕ್ಷಿಸುತೆ

ಕಂದರಿವರನು ಕಾಣೆನೇ ಹಾ
ಯೆಂದು ಧಗೆಯವಗಡಿಸಲಾಕ್ಷಣ
ನಿಂದು ನೋಡಿದ ಕೊಳನ ಜಲವನು ಭೂಪನಳವಳಿದು || ೨೮

ಹೋಗಲಿನ್ನೀ ನೀರುಗುಡಿದಿವ
ರಾಗುಹೋಗಱಿಸುವೆನೆನುತ ಧಗೆ
ತಾಗಿದವನಿಪನಿಳಿದು ಹೊಕ್ಕನು ವಿಷಸರೋವರವ
ಬಾಗಿ ಮೊಗೆದನು ಜಲವನಭ್ರದೊ
ಳಾಗಲಾದುದು ರಭಸವೆಲೆ ಸಕ
ಲಾಗಮಜ್ಞ ಮಹೀಶ ಕೇಳೆಂದುದು ನಭೋನಿನದ || ೨೯

ಅನುಜರವಿವೇಕಿಗಳು ಪರಿಣತ
ತನದಲಧಿಕನು ನೀ ನಿಧಾನಿಸೆ
ತನಗೆ ಮಾಱುತ್ತರವನಿತ್ತು ನಿರಂತರಾಯುದಲಿ
ತನುವಿಗಾಪ್ಯಾಯನವ ಮಾಡುವು
ದೆನಲು ಸ್ಥೈರಿಸಿ ಧಗೆಯ ನೋಡದೆ
ಘನಪಥದ ನುಡಿಯಾರದೆಂದವನೀಶನಾಲಿಸಿದ || ೩೦

ಬಿಸುಟನುದಕವನಾ ನುಡಿಯನಾ
ಲಿಸಿದನಾರೈ ನೀನು ನಿನಗಾ
ಗಸದಲಿರವೇಕಸುರನೊ ಕಿನ್ನರನೊ ನಿರ್ಜರನೊ
ಉಸುರೆನಲು ತಾ ಯಕ್ಷನೀ ಸಾ
ರಸವು ತನ್ನದು ನಿನ್ನ ತಮ್ಮದಿ
ರಸುವ ಸೆಳೆದವ ತಾನು ಕೇಳೆಲೆ ಧರ್ಮಸುತಯೆಂದ || ೩೧

ಬಾಲಕರು ನೀವೆನ್ನ ಮಾತನು
ಕೇಳಿಯುದಕವ ಕುಡಿವುದೆನೆ ಭೂ
ಪಾಲ ನಿನ್ನವರೆನ್ನ ಮಾತನು ಕೇಳಿ ಮನ್ನಿಸದೆ
ಮೇಲುಗಾಣದೆ ನೀರುಗುಡಿದು ವಿ
ಟಾಳಿಸಿದರಿನ್ನೆನ್ನ ಮಾತನು
ಕೇಳಿದುದಕವ ಕುಡಿವುದೆನೆ ಹೇಳೆಂದನವನೀಶ || ೩೨

ಜಲನಿಧಿಗೆ ಸರಿ ಸರಸಿಯಾವುದು
ನೆಲಕೆ ಹಿತವನದಾರು ಮರ್ತ್ಯಾ
ವಳಿಗೆ ಮಾತೆಯದಾರು ಸೂರ್ಯಪ್ರಭೆಗೆ ಸರಿಯೇನು
ತಿಳುಹು ಧರ್ಮಜ ಸಕಲಧರ್ಮಾ
ವಳಿಯ ಸಾರವನೆನಲು ಯಕ್ಷನ
ಬಲುಮೆಗವನೀಪಾಲನತಿ ಪರಿತೋಷದಲಿ ನುಡಿದ || ೩೩

ಗಗನವಬುಧಿಗೆ ಸರಿ ಸರೋವರ
ಜಗಕೆ ಹಿತವನು ಶಕ್ರ ಮರ್ತ್ಯಾ
ಳಿಗಳ ಮಾತಾರೂಪು ಗೋವುಗಳಿದು ನಿಧಾನಕಣ
ಬಗೆಯುಲಗ್ಗದ ಸತ್ಯವೆಂಬುದು
ಗಗನಮಣಿಗೆಣೆಯೆನಲು ಚಿತ್ತಕೆ
ಸೊಗಸಿ ತಲೆದೂಗಿದನು ಮಗುಳಿಂತೆಂದನಾ ಖಚರ || ೩೪

ನಯುವಿದನೆ ಕೇಳಾವನೈ ಕ್ಷ
ತ್ರಿಯನು ವಿಪ್ರರೊಳಾವನೈ ಶ್ರೋ
ತ್ರಿಯನು ಸುಜನರೊಳಾವನೈ ಮಹಪುರುಷನೆಂಬುವನು
ನಿಯತ ಧೀಮನನಾರು ದೇವ
ಪ್ರಿಯನದಾವನು ಕಠಿಣಕಷ್ಟಾ
ಶ್ರಯನದಾವನು ಧರ್ಮಸುತ ಹೇಳೆಂದನಾ ಖಚರ || ೩೫

ಧೃತಿಯುತ ಕ್ಷತ್ರಿಯನು ವೇದ
ಪ್ರಥಿತನೇ ಶ್ರೋತ್ರಿಯನಹಿಂಸಾ
ಮತಿ ಮಹಾಪುರುಷನು ಸುಧೀಮನು ಸಾಧು ಸೇವಕನು
ಸತತಪರರುಪಕಾರಿ ದೇವ
ಪ್ರತತಿವಂದ್ಯನು ಪರರ ಗುಣದು
ನ್ನತಿಯ ಸೈರಿಸದವನೆ ಕಷ್ಟನು ಯಕ್ಷ ಕೇಳೆಂದ || ೩೬

ನಿಂದ್ಯನಾವನು ಲೋಕದೊಳಗಭಿ
ವಂದ್ಯನಾವನು ಜೀವವಿರೆ ಮೃತ
ನೆಂಬನಾವನು ದೇಶಕಳಿವಹುದಾವ ತೆರದಿಂದ

ಸಂದ ಯಜ್ಞವದೆಂತು ಕೆಡುವುದು
ತಂದೆ ಹೇಳೆನೆ ಧರ್ಮಸುತ ಸಾ
ನಂದದಿಂದವೆ ಕಾಣಿಸಿದನಾ ಖಚರಗುತ್ತರವ || ೩೭

ಕೇಳು ಪರಸಿಂಧ್ಯಕನೆ ಸಿಂಧ್ಯನು
ಹೇಳಲೇಂ ಪರಹಿತನೆ ವಂದ್ಯನು
ಹೇಳದಿಚ್ಛೆಗೆ ನಡೆವ ನೃಪಸಿಂದಳಿವುದಾ ದೇಶ
ಕೇಳು ನಡೆವೆಣನೇ ದರಿದ್ರನು
ಸಾಲದೆಸಿಸಿದ ದಕ್ಷಿಣೆಯು ಯ
ಜ್ಞಾಳಿ ನಿಷ್ಫಲವೆಂದು ನುಡಿದನು ರಾಯ ಕೌಂತೇಯ || ೩೮

ನರಕಿ ಯಾವನು ಸುಜನರೊಳು ಬಾ
ಹಿರನದಾವನು ಲೋಕವರಿಯಲು
ಹರಣವಿರೆ ಹೊಂದಿದನದಾವನು ಭೂಮಿಪಾಲರಲಿ
ಮರುಳನಾವನು ಮಾನಭಂಗದಿ
ಭರಿತನಾವನು ಹೇಳು ಧರ್ಮಜ
ಸರಸಿಯಲಿ ಬಳಿಕುದಕವನು ಕುಡಿಯೆಂದನಾ ಖಚರ || ೩೯

ಎನೆ ಕೃತಘ್ನನೆ ನರಕಿ ವಿದ್ಯಾ
ಧನಮುಂದಾಧನೆ ಬಾಹಿರನು ಹೊ
ಕ್ಕನುವರವ ಹಿಂಗುವ ಮಹೀಪತಿ ಜೀವವಿರೆ ಮೃತನು
ವಿನುತ ಗುರುವಜ್ಞಾಯುದನೆ ಮರುಳಂ
ಗನೆಯೊರೊಳು ವಿಶ್ವಾಸಪರನೇ
ಜನವರಿಯಲಭಿಮಾನಹೀನನು ಯಕ್ಷ ಕೇಳೆಂದ || ೪೦

ಒಲಿದನೊಡಲನು ಧರ್ಮಸಂಗತಿ
ಗಳ ಸುಸಂವಾದದಲಿ ನಿಜತನು
ಪುಳಕವುಬ್ಬರಿಸಿದುದು ಸಲೆ ನೀಗಿದವು ದುಷ್ಕೃತವ
ಎಲೆ ಮಹೀಪತಿ ಮೆಚ್ಚಿದೆನು ಬೇ
ಡಳಿದ ಒಡಹುಟ್ಟಿದರೊಳೊಬ್ಬನ
ತಲೆಯ ಬದುಕಿಸಿ ಕೊಡುವೆನೆನೆ ಯಮತನುಜನಿಂತೆಂದ || ೪೧

ಅಸುವನಿತ್ತೈ ಯಕ್ಷಪತಿ ಜೀ
ವಿಸಲು ನಕುಲನು ಧನ್ಯ ತಾನೆನೆ
ನಸುನಗುತ ಚೇತರಿಸಿ ಮೈಮುರಿದೆದ್ದನಾ ನಕುಲ
ನಿಶಿತಮತಿ ಮೆಚ್ಚಿದನು ಬೇಡಿ
ನ್ನಸುವನೊಬ್ಬಂಗಿತ್ತೆನೆನೆ ಜೀ
ವಿಸಲಿ ಸಹದೇವಾಂಕನೆಂದನು ಧರ್ಮನಂದನನು || ೪೨

ಜನಪ ನಿನ್ನಾಳಾಪವೆನ್ನಯ
ಮನಕೆ ವಿಸ್ಮಯವಾಯ್ತು ಭೀಮಾ
ರ್ಜುನರು ನಿನ್ನೊಡಹುಟ್ಟಿದರು ನೀನವರಿಗತಿಹಿತನು
ಅನುಜರವರಿರಲೇಕೆ ಮಾದ್ರೀ
ತನುಜರೆಚ್ಚರ ಬಯಸಿದೈ ಹೇ
ಳೆನಲು ನಸುನಗೆ ಮೊಳೆಯೆ ನುಡಿದನು ಧರ್ಮನಂದನನು || ೪೩

ಸಾವು ಬೊಪ್ಪಂಗಾಗೆ ಮಾದ್ರಾ
ದೇವಿಯೆನ್ನನು ಕರೆದು ಶಿಶುಗಳ
ಸಾವು ಕೇಡಿದು ನಿನ್ನದಾರೈದಿವರ ಸಲಹುವುದು
ಭಾವಭೇಧವನಣುವ ಬಗೆಯದೆ
ಕಾವುದೈಯೆಲೆ ಮಗನೆ ಬೆಸಸಿದ
ಳಾವ ಪರಿಯಲಿ ಮರೆವೆನೈ ಮಾದ್ರೀ ಕುಮಾರಕರ || ೪೪

ಎನಲು ಮೆಚ್ಚಿದನುಳಿದ ಭೀಮಾ
ರ್ಜುನರ ಹರಣವನಿತ್ತು ನಿಜನಂ
ದನನಪ್ಪಿದನೊಲವಿನಲಿ ಯಮರಾಜನೈತಂದು
ತನುಜ ಸಾಕಿನ್ನಾಯ್ತು ನಿಮಗೀ
ವನನಿವಾಸವು ಬೀಳುಕೊಡಿ ಮುನಿ
ಜನವ ನಿನ್ನಜ್ಞಾತವಾಸಕೆ ಮನವ ಮಾಡೆಂದ || ೪೫

ನೀವು ಪಾಂಡವರೆಂದು ನಿಮ್ಮನ
ದಾವ ಮಾನವರರಿಯದಿರಲಿ ಮ
ಹಾವಿಭವದಲಿ ಬೆಳಗುವುದು ಬಳಿಕವನಿಮಂಡಲವ

ದೈವಬಲ ನಿಮಗುಂಟು ವೇಣಿ
ನ್ನಾವುದರಿಂದಲ್ಲೆಂದು ತನುಜರ
ನೋವಿ ಮನ್ನಿಸಿ ಬೀಳುಕೊಟ್ಟನು ಪಾಂಡುನಂದನರ || ೪೬

ಅರಣಿಯನು ತಂದಿತ್ತು ಧರಣೀ
ಸುರನ ಮನ್ನಿಸಿ ಸಕಲ ಮುನಿಗಳ
ಕರಸಿದನು ಧೌಮ್ಯಾದಿಗಳಿಗೀ ಹದನನರುಹಿದನು
ವರ ಸುಭದ್ರಾದೇವಿ ಪಾಂಚಾ
ಲರನು ಧೃಷ್ಟದ್ಯುಮ್ನ ಮೊದಲಾ
ಗಿರೆ ನಿಜಾಪ್ತರನವರವರ ಪಟ್ಟಣಕೆ ಕಳುಹಿದನು || ೪೭

ಶ್ರೀಮದಚಿಂತ್ಯ ಗದುಗಿನ ವೀರನಾರಾಯಣ ಚರಣಾರವಿಂದ ಮಕರಂದ
ಮಧುಪಾನ ಪರಿಪುಷ್ಟವಚಷ್ಷಟ್ಪದೀನಿಕಾಯ ಶ್ರೀಮತ್ಕು
ಮಾರವ್ಯಾಸ ಯೋಗೀಂದ್ರ ವಿರಚಿತಮಪ್ಪ ಕರ್ಣಾಟಕ
ಭಾರತ ಕಥಾಮಂಜರಿಯೊಳ್

**ಅರಣ್ಯಪರ್ವ ಸಂಗ್ರಹಂ**

ಸಮಾಪ್ತಂ

# ಶಬ್ದಕೋಶ

[ಮೊದಲ ಸಂಖ್ಯೆ ಸಂಧಿಯನ್ನೂ ಎರಡನೆಯ ಸಂಖ್ಯೆ ಪದ್ಯವನ್ನೂ ಸೂಚಿಸುತ್ತದೆ. ಸಂ. ಎಂದರೆ ಸಂಸ್ಕೃತ; ಧಾ. ಎಂದರೆ ಧಾತು ಎಂದರ್ಥ]

## ಅ

| | | | |
|---|---|---|---|
| ಅಕ್ಷತೌಘ | 4 | 4 | ಮಂತ್ರಾಕ್ಷತೆಯ ಸುರಿಮಳೆ |
| ಅಕ್ಷಲೀಲಾವ್ಯಸನ | 7 | 7 | ಜೂಜಿನ ಗೀಳು |
| ಅಕ್ಕಾಡು | 5 | 23 | ಶಕ್ತಿಗುಂದು |
| ಅಂಕಕಾತಿ | 6 | 18 | ಸುಪ್ರಸಿದ್ಧಳಾದ ಹೆಂಗಸು |
| ಅಂಗುಲಿ | 6 | 61 | ಬೆರಳು |
| ಅಗಜೆ | 5 | 65 | ಪಾರ್ವತಿ |
| ಅಗಡಿಗ | 6 | 61 | ವಂಚಕ |
| ಅಗಧರ | 4 | 14 | ವಿಷ್ಣು (ಮಂದರಪರ್ವತವನ್ನು ಎತ್ತಿದ ಶ್ರೀ ಕೃಷ್ಣ) |
| ಅಗ್ಗಳಿಕೆ | 1 | 5 | ಅತಿಶಯ |
| ಅಘ | 5 | 69 | ಪಾಪ |
| ಅಘಾಟ | 6 | 39 | ಆಶ್ಚರ್ಯ, ಆಧಿಕ್ಯ |
| ಅಂಘ್ರಿ | 4 | 24 | ಪಾದ |
| ಅಂಘವಣೆ | 4 | 29 | ಸಾಮರ್ಥ್ಯ, ಅಭಿಪ್ರಾಯ (?) |
| ಅಂಜುಳಿ | 9 | 11 | ಬೊಗಸೆ |
| ಅಟವಿ | 3 | 19 | ಅರಣ್ಯ |
| ಅಟವಿಗೋಟಲೆ | 7 | 5 | ಅರಣ್ಯವಾಸದ ತೊಂದರೆ |
| ಅಡಹಾಯ್ | 5 | 8 | ಪ್ರತಿಭಟಿಸು, ಇದಿರಿಸು |
| ಅಡಾಯುಧ | 4 | 10 | ಒಂದು ಬಗೆಯ ಆಯುಧ |
| ಅಂಡಲೆ | 5 | 31 | ತೊಂದರೆಗೊಳ್ಳು, ಹಿಂಸೆಗೊಳ್ಳು |
| ಅಣದುದು | 6 | 37 | ಮರ್ದಿಸಿತು, ಹಿಮ್ಮೆಟ್ಟಿಸಿತು |
| ಅಂತಕ | 7 | 37 | ಯಮ |
| ಅರ್ಥಿಸು | 3 | 26 | ಬೇಡು |
| ಅಧರ | 8 | 10 | ತುಟಿ |

ಆ

| | | | |
|---|---|---|---|
| ಆರ್ತರು | 4 | 24 | ದುಃಖಿತರು |
| ಆಱಡಿಗೈದು | 4 | 8 | ಅಲ್ಲಲ್ಲಿ ಸಂಚರಿಸಿ (?) |
| ಆಲಿ | 5 | 19 | ರೆಪ್ಪೆ |
| ಆಸನ್ನ | 9 | 6 | ಹತ್ತಿರದ |
| ಆಸಱು | 8 | 25 | ಆಲಸ್ಯ |
| ಆಹವ | 5 | 15 | ಯುದ್ಧ |

ಇ

| | | | |
|---|---|---|---|
| ಇಟ್ಟೆಡೆ | 4 | 5 | ಸಮ್ಮರ್ದ |
| ಇತ್ತಡಿ | 8 | 9 | ಎರಡು ಪಡ |
| ಇಂದುಮೌಳಿ | 4 | 13 | ಈಶ್ವರ |
| ಇಂದೂಪಲ | 6 | 37 | ಚಂದ್ರಕಾಂತ ಶಿಲೆ |
| ಇಂಧನ | 3 | 16 | ಸೌದೆ |
| ಇಬ್ಬಗಿ | 5 | 48 | ಎರಡು ಭಾಗ, ಎರಡು ಬಗೆ |
| ಇಂಬು | 5 | 7 | ವಾಸಸ್ಥಾನ, ಆಶ್ರಯ |
| ಇಱುಂಬು | 9 | 6 | ಇಕ್ಕಟ್ಟು, ಪೊದೆ |

ಈ

| | | | |
|---|---|---|---|
| ಈಡಿಱಿದು | 5 | 54 | ಆಳವಾಗಿ ನಾಟಿ (?) |

ಉ

| | | | |
|---|---|---|---|
| ಉಗ್ಘಡಣೆ | 3 | 5 | ಘೋಷಣೆ |
| ಉಗಿ | 5 | 10 | ಸೆಳೆ |
| ಉತ್ಕೋಚವಾಗು | 4 | 17 | ವೃದ್ಧಿಗೊಳ್ಳು |
| ಉತ್ತಮಾಂಗ | 5 | 46 | ಶಿರ, ತಲೆ |
| ಉದ್ದಂಡತನ | 5 | 31 | ದರ್ಪ, ಸೊಕ್ಕು |
| ಉಪಚರಿತರು | 7 | 35 | ಹತ್ತಿರ ಸುಳಿವವರು |
| ಉಪ್ಪರಿಸು | 5 | 9 | ಹಾರು (?) |
| ಉಬ್ಬಟೆ | 5 | 17 | ಉನ್ನತಿ |
| ಉಬ್ಬೆ | 3 | 2 | ವ್ಯಥೆ |
| ಉಮ್ಮಳಿಸು | 6 | 1 | ವ್ಯಥೆಪಡು |
| ಉರವಣೆ | 5 | 25 | ರಭಸ, ಜೋರು |
| ಉಱುಬು | 7 | 34 | ಉಬ್ಬು, ಗರ್ಜಿಸು |
| ಉಱುವ | 8 | 20 | ಶ್ರೇಷ್ಠವಾದ |

| | | | |
|---|---|---|---|
| ಉಲಿ | 7 | 4 | ಹೇಳು, ಶಬ್ದಮಾಡು |
| ಉಲುಹು | 1 | 5 | ಶಬ್ದ |

ಎ

| | | | |
|---|---|---|---|
| ಎಕ್ಕತುಳ | 6 | 12 | ಒಂದೇ ತೂಕ; ಒಟ್ಟಿಗೆ |
| ಎಕ್ಕಲ | 5 | 9 | ಹಂದಿ |
| ಎಸುಗೆ | 5 | 24 | ಬಾಣಪ್ರಯೋಗ |
| ಎಳನೆಱ್ | 5 | 28 | ಬಾಲಚಂದ್ರ |

ಏ

| | | | |
|---|---|---|---|
| ಏಕಾಮಿಷ | 5 | 12 | ಒಂದೇ ವಸ್ತುವಿನಲ್ಲಿ ಇಬ್ಬರಿಗಿರುವ ಆಶೆ |
| ಏಡಿಸು | 7 | 14 | ಅಣಕಿಸು |

ಐ

| | | | |
|---|---|---|---|
| ಐದಿಸು | 5 | 30 | ಸಮೀಪಿಸು, ಸಿದ್ಧನಾಗು |

ಒ

| | | | |
|---|---|---|---|
| ಒಕ್ಕುದು | 5 | 37 | ಚಲ್ಲಿತು |
| ಒಗ್ಗು | 7 | 41 | ಗೊಂದಣ, ಸಮೂಹ |
| ಒಡ್ಡವ | 1 | 5 | ಪದಜೋಡಣೆ, ಶೈಲಿ |
| ಒಡ್ಡವಣೆ | 5 | 38 | ಸನ್ನಾಹ |
| ಒತ್ತೊತ್ತೆ | 6 | 16 | ದಟ್ಟ, ಸಾಂದ್ರತೆ |
| ಒಱ್ | 3 | 11 | ಜಿನುಗು, ದ್ರವಿಸು |
| ಒಲಹು | 6 | 19 | ಅಲ್ಲಾಡುವಿಕೆ |
| ಒಸಗೆ | 6 | 15 | ಉತ್ಸವ, ಸಂತೋಷ |

ಕ

| | | | |
|---|---|---|---|
| ಕಟಕ | 3 | 20 | ಸಮೂಹ ಸೈನ್ಯ |
| ಕಟಕಿ | 5 | 17 | ಹಾಸ್ಯ, ಲೇವಡಿ |
| ಕಟಾಕ್ಷ | 5 | 54 | ಕಡೆಗಣ್ ನೋಟ |
| ಕಡುಗು | 6 | 42 | ಉತ್ಸಾಹಗೊಳ್ಳು |
| ಕಡುಹು | 5 | 32 | ತೀವ್ರತೆ, ವೇಗ |
| ಕಣಲಿಗೆ | 5 | 41 | ಕಣಗಿಲೆ ಹೂ |

| | | | |
|---|---|---|---|
| ಕಣೆ | 5 | 10 | ಬಾಣ |
| ಕದಪು | 6 | 17 | ಕೆನ್ನೆ |
| ಕನಲಿಸು | 2 | 9 | ಕೋಪಗೊಳಿಸು |
| ಕಮಠ | 7 | 74 | ಆಮೆ |
| ಕಮಲಾಂಬಕ | 3 | 21 | ವಿಷ್ಣು |
| ಕಮನೀಯ | 6 | 32 | ಮನೋಹರ |
| ಕರಹಿತವ | 5 | 22 | ಅತ್ಯಂತ ಹಿತನಾದವನು |
| ಕರಿಮುಖ | 5 | 68 | ವಿಘ್ನೇಶ್ವರ |
| ಕಱು | 2 | 18 | ಮರಿ |
| ಕಱೆ | 3 | 24 | ಕಳಂಕ, ತಪ್ಪು |
| ಕಲ್ಲೋಲಿತ | 5 | 54 | ತೆರೆತೆರೆಯಾಗಿ ಬರುವ |
| ಕಳಚು | 5 | 27 | ನಿವಾರಿಸು |
| ಕಳಂಬ | 5 | 18 | ಬಾಣ |
| ಕಾಕು | 5 | 40 | ವಕ್ರ, ನೀಚತನ |
| ಕಾತು | 6 | 72 | ಫಲಿತವಾಗಿ |
| ಕಾಮವೈರಿ | 4 | 3 | ಈಶ್ವರ |
| ಕಾಹು | 7 | 32 | ಕಾವಲು, ರಕ್ಷಣೆ |
| ಕಾಹುರ | 5 | 38 | ಆವೇಶ, ಉದ್ರೇಕ |
| ಕಿಂಕಿಣಿ | 6 | 19 | ಗೆಜ್ಜೆ |
| ಕಿಗ್ಗಟ್ಟಿನ | 4 | 10 | ಕೆಳಗೆ ಕಟ್ಟಿದ |
| ಕುಂಚಿತ | 7 | 24 | ಕುಟಿಲ, ವಕ್ರ |
| ಕುಂತ | 2 | 3 | ಒನಕೆಯಂಥ ಆಯುಧ |
| ಕುಶೆ | 4 | 26 | ದರ್ಭೆ |
| ಕುಲಾಲ | 5 | 56 | ಕುಂಬಾರ |
| ಕುಳಿ | 6 | 76 | ತಗ್ಗು |
| ಕೂಲವತಿ | 3 | 19 | ಸಣ್ಣ ಹೊಳೆ |
| ಕೃಚ್ಛ್ರ | 1 | 6 | ಪ್ರಾಯಶ್ಚಿತ್ತ ಕರ್ಮ |
| ಕೃತಾಂತ | 6 | 79 | ಯಮ |
| ಕೃಶಾನು | 8 | 15 | ಅಗ್ನಿ |
| ಕೆಡಗುತ್ತು | 5 | 8 | ಕೆಳಗೆ ಬೀಳುವಂತೆ ಹೊಡೆ |
| ಕೆತ್ತು | 6 | 56 | ಅದುರು |

| | | | |
|---|---|---|---|
| ಉಲಿ | 7 | 4 | ಹೇಳು, ಶಬ್ದ ಮಾಡು |
| ಉಲುಹು | 1 | 5 | ಶಬ್ದ |

ಎ

| | | | |
|---|---|---|---|
| ಎಕ್ಕತುಳ | 6 | 12 | ಒಂದೇ ತೂಕ; ಒಟ್ಟಿಗೆ |
| ಎಕ್ಕಲ | 5 | 9 | ಹಂದಿ |
| ಎಸುಗೆ | 5 | 24 | ಬಾಣಪ್ರಯೋಗ |
| ಎಳನೆಱ | 5 | 28 | ಬಾಲಚಂದ್ರ |

ಏ

| | | | |
|---|---|---|---|
| ಏಕಾಮಿಷ | 5 | 12 | ಒಂದೇ ವಸ್ತುವಿನಲ್ಲಿ ಇಬ್ಬರಿಗಿರುವ ಆಶೆ |
| ಏಡಿಸು | 7 | 14 | ಅಣಕಿಸು |

ಐ

| | | | |
|---|---|---|---|
| ಐದಿಸು | 5 | 30 | ಸಮೀಪಿಸು, ಸಿದ್ಧನಾಗು |

ಒ

| | | | |
|---|---|---|---|
| ಒಕ್ಕುಡು | 5 | 37 | ಚಲ್ಲಿತು |
| ಒಗ್ಗು | 7 | 41 | ಗೊಂದಣ, ಸಮೂಹ |
| ಒಡ್ಡವ | 1 | 5 | ಪದಜೋಡಣೆ, ಶೈಲಿ |
| ಒಡ್ಡವಣೆ | 5 | 38 | ಸನ್ನಾಹ |
| ಒತ್ತೊತ್ತೆ | 6 | 16 | ದಟ್ಟ, ಸಾಂದ್ರತೆ |
| ಒಱೆ | 3 | 11 | ಜಿನುಗು, ದ್ರವಿಸು |
| ಒಲಹು | 6 | 19 | ಅಲ್ಲಾಡುವಿಕೆ |
| ಒಸಗೆ | 6 | 15 | ಉತ್ಸವ, ಸಂತೋಷ |

ಕ

| | | | |
|---|---|---|---|
| ಕಟಕ | 3 | 20 | ಸಮೂಹ ಸೈನ್ಯ |
| ಕಟಕಿ | 5 | 17 | ಹಾಸ್ಯ, ಲೇವಡಿ |
| ಕಟಾಕ್ಷ | 5 | 54 | ಕಡೆಗಣ್ ನೋಟ |
| ಕಡುಗು | 6 | 42 | ಉತ್ಸಾಹಗೊಳ್ಳು |
| ಕಡುಹು | 5 | 32 | ತೀವ್ರತೆ, ವೇಗ |
| ಕಣಗಿಲೆ | 5 | 41 | ಕಣಗಿಲೆ ಹೂ |

| | | | |
|---|---|---|---|
| ಕಣೆ | 5 | 10 | ಬಾಣ |
| ಕದಪು | 6 | 17 | ಕೆನ್ನೆ |
| ಕನಲಿಸು | 2 | 9 | ಕೋಪಗೊಳಿಸು |
| ಕಮಠ | 7 | 74 | ಆಮೆ |
| ಕಮಲಾಂಬಕ | 3 | 21 | ವಿಷ್ಣು |
| ಕಮನೀಯ | 6 | 32 | ಮನೋಹರ |
| ಕರಹಿತವ | 5 | 22 | ಅತ್ಯಂತ ಹಿತನಾದವನು |
| ಕರಿಮುಖ | 5 | 68 | ವಿಘ್ನೇಶ್ವರ |
| ಕಱು | 2 | 18 | ಮರಿ |
| ಕಜ಼ು | 3 | 24 | ಕಳಂಕ, ತಪ್ಪು |
| ಕಲ್ಲೋಲಿತ | 5 | 54 | ತೆರೆತೆರೆಯಾಗಿ ಬರುವ |
| ಕಳಚು | 5 | 27 | ನಿವಾರಿಸು |
| ಕಳಂಬ | 5 | 18 | ಬಾಣ |
| ಕಾಕು | 5 | 40 | ವಕ್ರ, ನೀಚತನ |
| ಕಾತು | 6 | 72 | ಫಲಿತವಾಗಿ |
| ಕಾಮವೈರಿ | 4 | 3 | ಈಶ್ವರ |
| ಕಾಹು | 7 | 32 | ಕಾವಲು, ರಕ್ಷಣೆ |
| ಕಾಹುರ | 5 | 38 | ಆವೇಶ, ಉದ್ರೇಕ |
| ಕಿಂಕಿಣಿ | 6 | 19 | ಗೆಜ್ಜೆ |
| ಕಿಗ್ಗಟ್ಟಿನ | 4 | 10 | ಕೆಳಗೆ ಕಟ್ಟಿದ |
| ಕುಂಚಿತ | 7 | 24 | ಕುಟಿಲ, ವಕ್ರ |
| ಕುಂತ | 2 | 3 | ಒನಕೆಯಂಥ ಆಯುಧ |
| ಕುಶೆ | 4 | 26 | ದರ್ಭೆ |
| ಕುಲಾಲ | 5 | 56 | ಕುಂಬಾರ |
| ಕುಳಿ | 6 | 76 | ತಗ್ಗು |
| ಕೂಲವತಿ | 3 | 19 | ಸಣ್ಣ ಹೊಳೆ |
| ಕೃಚ್ಛ್ರ | 1 | 6 | ಪ್ರಾಯಶ್ಚಿತ್ತ ಕರ್ಮ |
| ಕೃತಾಂತ | 6 | 79 | ಯಮ |
| ಕೃಶಾನು | 8 | 15 | ಅಗ್ನಿ |
| ಕೆಡಗುತ್ತು | 5 | 8 | ಕೆಳಗೆ ಬೀಳುವಂತೆ ಹೊಡೆ |
| ಕೆತ್ತು | 6 | 56 | ಅದುರು |

| | | | |
|---|---|---|---|
| ಕೆಲ್ಲವಿಸು | 6 | 55 | ಅಧಿಕವಾಗು (?) |
| ಕೇವಣ | 6 | 19 | ಕುಂದಣ ; ಕೀಲಣೆ |
| ಕೇಣ | 9 | 22 | ಮತ್ಸರ |
| ಕೈಲಾಸವಾಸಿ | 6 | 1 | ಈಶ್ವರ |
| ಕೈಗುಡಿ | 8 | 10 | ಕೈಲಿ ಹಿಡಿದ ಸಣ್ಣ ಬಾವುಟ ? |
| ಕೊಡಚೆ | 4 | 9 | ಕಶ್ಮಲ ? |
| ಕೊಪ್ಪರಿಸು | 2 | 10 | ಮರ್ದಿಸು, ಜಜ್ಜು |
| ಕೊರಳುಗೊಳಿಸು | 5 | 56 | ನಿಗ್ರಹಿಸು ? |
| ಕೊಲ್ಲಣಿಗೆ | 4 | 7 | ಆಟ, ವಿನೋದ |
| ಕೋಡದಿರು | 5 | 60 | ಸಂಕಟಪಡದಿರು |
| ಕಂಜಾಳಿ | 9 | 8 | ತಾವರೆ ಸಮೂಹ |
| ಕಂಠಪತ್ರ | 1 | 5 | ಕಂಠದಿಂದ ಬರೆಯುವ ತಾಳೆಗರಿ |
| ಕಾಂತಾರ | 2 | 21 | ಅಡವಿ |
| ಕ್ರತು | 3 | 21 | ಯಜ್ಞ |

ಖ

| | | | |
|---|---|---|---|
| ಖತಿ | 7 | 36 | ಕೋಪ |
| ಖಂಡಪರಶು | 5 | 46 | ಈಶ್ವರ |
| ಖರರುಚಿ | 6 | 3 | ಸೂರ್ಯ |
| ಖೋಡಿ | 6 | 54 | ದೋಷ |

ಗ

| | | | |
|---|---|---|---|
| ಗಡಾವಣೆ | 5 | 55 | ಗದ್ದಲ, ಅಬ್ಬರ |
| ಗದಗದಿಸು | 5 | 48 | ಗದ್ಗದ ದನಿಮಾಡು |
| ಗರಳ | 8 | 15 | ವಿಷ |
| ಗರುವ | 8 | 34 | ಶ್ರೇಷ್ಠ |
| ಗರುವಾಯು | 6 | 18 | ದರ್ಪ |
| ಗರ್ತ | 2 | 19 | ತಗ್ಗು |
| ಗವಿ | 7 | 21 | ಆಕಳು, ಹಸು |
| ಗಳಗಳಂಟಿ | 5 | 5 | ತುದಿಯಲ್ಲಿ ಅಂಟುಮೆತ್ತಿದ ಗಳು |
| ಗಾಢಿಕೆ | 7 | 37 | ತೀಕ್ಷ್ಣತೆ |
| ಗಾವಳಿ | 5 | 8 | ಅಬ್ಬರ (?) |
| ಗಾವಿಲ | 6 | 58 | ಗ್ರಾಮೀಣ (ಸಂ) ಎಗ್ಗ, ಹೆಡ್ಡ |

| | | | |
|---|---|---|---|
| ಗಾಹು | 6 | 57 | ವಂಚನೆ, ಮೋಸ |
| ಗುಡಿ | 2 | 20 | ಧ್ವಜಸ್ತಂಭ |
| ,, | 7 | 19 | ಧ್ವಜ |
| ಗುಹ್ಯಕ | 9 | 11 | ಯಕ್ಷ |
| ಗೇಯ | 2 | 21 | ಹಾಡು |
| ಗೊಂಡೆಯ | 4 | 5 | ಕುಚ್ಚು |
| ಗೊಂದಣ | 6 | 8 | ಗುಂಪು |
| ಗೋಣು | 5 | 43 | ಕೊರಳು |

## ಘ

| | | | |
|---|---|---|---|
| ಘುಲ್ಲಣೆ | 7 | 37 | ಸಂಘಟ್ಟನೆ; ತಾಗುವಿಕೆ |
| ಘುಲ್ಲಿಸು | 4 | 2 | ತಾಗು, ಸಂಘಟ್ಟಿಸು |
| ಘಾಟ | 7 | 39 | ಸೈನ್ಯಕ್ಕೆ ಸಾಮಾನು ಒದಗಿಸುವವರು (?) |
| ಘಾಳಿಗೊಂಬು | 5 | 5 | ಒಂದು ಬಗೆಯ ಕಹಳೆ |
| ಘೀಳಿಡು | 5 | 10 | ಗರ್ಜಿಸು, ನೋವಿನಿಂದ ಅರಿಚಿಕೊ |

## ಚ

| | | | |
|---|---|---|---|
| ಚಪೇಟ | 2 | 18 | ಅಂಗೈಯಿನ ಏಟು |
| ಚರುಕ | 2 | 6 | ಪಾತ್ರೆ |
| ಚಂಡಿಕೆ | 7 | 24 | ಶಿಖೆ (ಜುಟ್ಟು) |
| ಚಾಳೈಸು | 5 | 32 | ಕದಲಿಸು |
| ಚಾಳವಿಸು | 6 | 30 | ,, |
| ಚಿಸಕಡಿ | 7 | 50 | ಸಣ್ಣತುಂಡು, ಛಿದ್ರಛಿದ್ರವಾಗಿ ಮಾಡಿದ ತುಂಡುಗಳು |
| ಚುಂಬಕ | 3 | 21 | ಮುತ್ತು, ಆಕರ್ಷಕ ವಸ್ತು |
| ಚೆಲ್ಲಗಂಗಳು | 4 | 7 | ನಿಡಿದಾದ ಕಣ್ಣುಗಳು |
| ಚೈಮುಂಡಾಡು | 5 | 60 | ಆಲಿಂಗಿಸು |
| ಚೊಕ್ಕೆಯ | 5 | 34 | ತಂತ್ರ |
| ಚೌಕಿಗೆ | 2 | 20 | ಒಳಮನೆಯ ಅಂಗಳ |

## ಛ

| | | | |
|---|---|---|---|
| ಛಡಾಳಿಸು | 4 | 30 | ಅಧಿಕವಾಗು, ವೆಗ್ಗಳಿಸು |
| ಛವಿ | 5 | 54 | ಕಾಂತಿ |

## ಜ

| | | | |
|---|---|---|---|
| ಜಡಿ | 6 | 16 | ತುಂಬು |
| ಜವನಿಕೆ | 4 | 18 | ಯವನಿಕಾ (ಸಂ) ಪರದೆ |
| ಜುಂಜುವೊಳೆ | 5 | 21 | ಸಣ್ಣ ಹೊಳೆ |
| ಜುಂಜಪೂಗ | 6 | 5 | ಅಲ್ಪ, ಸಾಮಾನ್ಯ ? |
| ಜಂಬುಕ | 2 | 21 | ನರಿ |
| ಜಂಭಾರಿ | 6 | 24 | ಇಂದ್ರ |
| ಜಾಣಾಯ್ಲ | 6 | 68 | ಚತುರತೆ |
| ಜಾಳಿಗೆ | 7 | 42 | ಬಲೆ |
| ಜೊತ್ತಿಸು | 6 | 56 | ಜೋಡಿಸು |
| ಜೋದ | 7 | 56 | ಮಾವಟಿಗ |
| ಜೋಳಿ | 6 | 30 | ಜೊತೆ, ಜೋಡಿ |

## ಝ

| | | | |
|---|---|---|---|
| ಝುಡಿತೆ | 5 | 32 | ಜೋರು, ವೇಗ |
| ಝುಲ್ಲಿಕ | 2 | 21 | ಜೀರುಂಡೆ |
| ಝಾಡಿ | 5 | 19 | ಹೊದರು |
| ಝೊಮ್ಮೇಳಿ | 6 | 66 | ಜೊಮ್ಮು ಹತ್ತು |

## ಟ

| | | | |
|---|---|---|---|
| ಟೆಕ್ಕರಿಗಳೆ | 6 | 44 | ನಿರಾಕರಿಸು, ಉಪೇಕ್ಷೆಮಾಡು |
| ಟೆಬ್ಬರಿಸು | 5 | 38 | ಕುಂಠಿತವಾಗು |

## ಡ

| | | | |
|---|---|---|---|
| ಡಾವರಿಗ | 4 | 12 | ಮೋಸ |
| ಡಾಳಿಸು | 4 | 19 | ಕಾಂತಿಯುಕ್ತವಾಗು |
| ಡೆಂಢಣಿಸಿ | 2 | 19 | ಆಯಾಸ ಹೊಂದಿ |
| ಡೊಂಬು | 7 | 6 | ಅಪುಟ |
| ಡೊಂಬಿ | 7 | 22 | ಗುಂಪು |
| ಡೊಳ್ಳಾಸಕಾತಿ | 6 | 19 | ಮಾಯಗಾತಿ |

## ಢ

| | | | |
|---|---|---|---|
| ಢಾಳಿಸು | 5 | 24 | ಕಾಂತಿಯುಕ್ತವಾಗು |

## ತ

| | | | |
|---|---|---|---|
| ತಟಾಕ | 7 | 19 | ಕೆರೆ |
| ತಡಪೇಂಟಿ | 6 | 34 | ಎಂಟು ಪೇಟೆಗಳಲ್ಲಿ ಒಂದು |
| ತಮ್ಮಟ | 5 | 29 | ಪೂಜಾರಿ, ಅಯ್ಯ |
| ತಮ್ಮಡಿ | 5 | 14 | ,, |
| ತರಣಿ | 4 | 8 | ಸೂರ್ಯ |
| ತರಳ | 7 | 9 | ಚಂಚಲ |
| ತರಹರಿಸು | 4 | 11 | ತತ್ತರಿಸು |
| ತಲಹು | 6 | 6 | ? |
| ತವ | 3 | 23 | ನಿನ್ನ |
| ತವನಿಧಿ | 2 | 6 | ಬತ್ತಿಹೋಗದ ನಿಧಿ |
| ತವಲಾಯಿ | 6 | 18 | ತಾಂಬೂಲದ ಭರಣಿ |
| ತಳಿ | 7 | 29 | ಸುತ್ತಲೂ ಕಟ್ಟಿರುವ ತಡಿಕೆ |
| ತಳುಕಿ | 6 | 13 | ಆಲಿಂಗಿಸಿ, ಜೋಡಿಸಿ |
| ತಳುವು | 8 | 2 | ನಿಧಾನ |
| ತಾಟಂಕ ಮುದ್ರೆ | 8 | 8 | ತಾಳಿಯ ಚಿಹ್ನೆ ? |
| ತಾಮರಸ | 7 | 65 | ಕಮಲ |
| ತಾಳಿಗೆ | 9 | 6 | ಗಂಟಲು |
| ತೀದುದು | 4 | 25 | ಮುಗಿದು ಹೋಯಿತು |
| ತೀವು | 6 | 9 | ತುಂಬು |
| ತುತ್ತು | 5 | 46 | ನುಂಗು |
| ತುಱುಪಳ್ಳಿ | 7 | 26 | ಗೋಗಣವಿರುವ ಹಳ್ಳಿ |
| ತುಱುಹಟ್ಟಿ | 7 | 11 | ಗೋಗಣವಿರುವ ಸ್ಥಳ |
| ತುಷಾರ | 5 | 21 | ಮಂಜು |
| ತೂಜಂಬು | 5 | 25 | ಎಸೆಯುವಬಾಣ |
| ತೂರ್ಯ | 6 | 22 | ವಾದ್ಯ |
| ತೂಳು | 3 | 2 | ಬೆನ್ನಟ್ಟು |
| ತೆಕ್ಕೆ | 6 | 12 | ಜೋಡಿ |
| ತೆಮಱು | 6 | 53 | ಓಡಿಸು, ಅಟ್ಟಿಕೊಂಡುಹೋಗು |
| ತೆರಳಿಕೆ | 4 | 9 | ಸಂಚಲ (?) |
| ತೆಱಹು | 1 | 3 | ಅವಕಾಶ |

| | | | |
|---|---|---|---|
| ತೇಡಿಸು | 7 | 24 | ಬೆರಳಿನಿಂದ ಉಜ್ಜು |
| ತೋಟಿ | 2 | 11 | ಜಗಳ, ಯುದ್ಧ |
| ತ್ರಿಪುಟಿ | 4 | 18 | ಧ್ಯಾನ, ಧ್ಯೇಯ, ಧ್ಯಾನಕರ್ತೃ |

## ದ

| | | | |
|---|---|---|---|
| ದಕ್ಕಡತನ | 7 | 2 | ಶೌರ್ಯ |
| ದಡಿವಲಿ | 5 | 5 | ಒಂದು ವಿಧವಾದ ಬಲಿ |
| ದಂಡಿ | 5 | 11 | ಯುದ್ಧ ? |
| ದಂಡಿಕಾಜಿ | 2 | 19 | ಸೆಣಸುಗಾರ |
| ದಂಡಿಗೆ | 3 | 3 | ಪಲ್ಲಕ್ಕಿ, |
| ದಧಿ | 4 | 4 | ಮೊಸರು |
| ದ್ವಾದಶಾತ್ಮ | 2 | 4 | ಸೂರ್ಯ |
| ದಿಂಡುಗೆಡೆ | 2 | 19 | ಉರುಳು, ಅಡ್ಡಬೀಳು |
| ದಿಂಡುದಱಿ | 5 | 11 | ತುಂಡಾಗುವಂತೆ ಕತ್ತರಿಸು |
| ದಿವಾಕರ | 7 | 5 | ಸೂರ್ಯ |
| ದಿವಿಜರಾಯ | 6 | 13 | ದೇವೇಂದ್ರ |
| ದೀರ್ಘಿಕೆ | 7 | 19 | ಸರೋವರ |
| ದುಕೂಲ | 3 | 3 | ವಸ್ತ್ರ (?) |
| ದುರ್ಮ್ಯಾನ | 3 | 3 | ಚಿಂತೆ |
| ದುರಿತ | 3 | 25 | ಪಾಪ |
| ದುವಾಳಿಸು | 6 | 52 | ತ್ವರೆಯಿಂದ ಮುಂದುವರೆ |
| ದ್ರುಮ | 6 | 5 | ವೃಕ್ಷ |
| ದೂಹತ್ತಿಲೌಡಿ | 7 | 56 | ಕೈಗಳೆರಡರಿಂದಲೂ ಕತ್ತಿ ಹಿಡಿದು ಹೋರಾಡುವ ವರಸೆ |
| ದೂರ್ವಾಕ್ಷತೆ | 4 | 4 | ದರ್ಭೆ ಮತ್ತು ಅಕ್ಷತೆಕಾಳು |
| ದೃಗುಯುಗಳ | 7 | 31 | ಕಣ್ಣುಗಳೆರಡು |
| ದೃಗುವಾರಿ | 3 | 5 | ಕಣ್ಣೀರು |
| ದೊಂಡೆ | 2 | 19 | ಕುಚ್ಚು |

## ಧ

| | | | |
|---|---|---|---|
| ಧರಣೀಸುರ | 7 | 1 | ಬ್ರಾಹ್ಮಣ |
| ಧ್ವಾನ | 2 | 21 | ಶಬ್ದ |
| ಧೀಮಂತ | 9 | 33 | ಬುದ್ಧಿವಂತ |

| | | | |
|---|---|---|---|
| ಧುರ | 5 | 65 | ಯುದ್ಧ |
| ಧೂರ್ಜಟಿ | 5 | 17 | ಶಿವ |
| ಧೌತಾಂಶುಕ | 7 | 24 | ಬಿಳಿಯ ಬಟ್ಟೆ, ಶುಭ್ರವಾದ ಬಟ್ಟೆ |
| ಧೃತಿ | 5 | 14 | ನಿಶ್ಚಲತೆ |

## ನ

| | | | |
|---|---|---|---|
| ನನೆಕೊನೆ | 4 | 9 | ಮೊಗ್ಗು ಚಿಗುರು |
| ನಭೋನಿನದ | 4 | 7 | ಆಕಾಶವಾಣಿ |
| ನಯನಸಲಿಲ | 3 | 22 | ಆನಂದಬಾಷ್ಪ |
| ನವಾಯಿ | 6 | 19 | ವೈಭವ |
| ನಾರಂಗ | 7 | 38 | ಕಿತ್ತಳೆ, |
| ನಾರಾಚ | 7 | 73 | ಬಾಣ |
| ನಿಕುಂಜ | 5 | 7 | ಪೊದೆ |
| ನಿಚ್ಚಲು | 7 | 5 | ಒಂದೇ ಸಮನಾಗಿ, ನಿತ್ಯ |
| ನಿತಂಬಿನಿ | 5 | 4 | ಹೆಣ್ಣು |
| ನಿದಾಘ | 4 | 20 | ಬೇಸಗೆ |
| ನಿಜಾಗೆ | 4 | 10 | ಕ್ರಮ |
| ನಿರ್ಜರ | 9 | 29 | ಮುಪ್ಪಿಲ್ಲದವ, ದೇವತೆ |
| ನಿರಂತರಾಯ | 6 | 60 | ವಿಚ್ಛಿತ್ತಿಯಿಲ್ಲದ, ಅವಿಚ್ಛಿನ್ನವಾಗಿ |
| ನಿರ್ಮೋಕಮುಕ್ತಭುಜಂಗ | 5 | 70 | ಪೊರೆಬಿಟ್ಟ ಹಾವು |
| ನಿರ್ಘೋಷ | 6 | 9 | ಧ್ವನಿ |
| ನಿರ್ದಾಯ | 6 | 77 | ಪೂರ್ಣವಾಗಿ |
| ನಿರಾಮಯ | 6 | 40 | ಪರಿಶುದ್ಧ |
| ನಿರ್ವಾಹ | 2 | 7 | ಸಂರಕ್ಷಣೆ |
| ನಿರೂಢಿ | 2 | 7 | ಕೌಶಲ (?) |
| ನೀಲಲೋಹಿತ | 4 | 24 | ಈಶ್ವರ |
| ನಿವಹ | 7 | 14 | ಗುಂಪು |
| ನಿಷ್ಪ್ರಕಂಪನ | 4 | 10 | ಕಂಪನವಿಲ್ಲದ |
| ನಿಷ್ಪ್ರತ್ಯೂಹ | 4 | 3 | ತಡೆಯಿಲ್ಲದ |
| ನಿಸ್ಖಲಿತ | 4 | 17 | ಜಾರದ |
| ನೆಗಳ್ | 7 | 13 | ಪ್ರಸಿದ್ಧಿಯಾಗು |
| ನೆಗ್ಗು | 3 | 2 | ಅಡಗು, ಕುಗ್ಗು |

| | | | |
|---|---|---|---|
| ನೆಮ್ಮು | 4 | 9 | ನಂಬು |
| ನೇವಣ | 6 | 19 | ಕಂಠೀಹಾರ |
| ನೇವುರ | 6 | 19 | ನೂಪುರ (ಸಂ) |
| ನೊಸಲು | 4 | 23 | ಹಣೆ |
| ನೋನ್ | 7 | 3 | ವ್ರತಾಚರಣೆ |

## ಪ

| | | | |
|---|---|---|---|
| ಪಂಕ | 5 | 49 | ಕೆಸರು |
| ಪಂಕಜ | 6 | 7 | ಕಮಲ |
| ಪಟಹ | 8 | 11 | ಭೇರಿ |
| ಪಡಿವಾಘೆ | 7 | 55 | ಲಗಾಮು |
| ಪಂಠಿಸು | 6 | 30 | ತಲೆಕೆಳಗಾಗು (?) |
| | 7 | 20 | |
| ಪಣವ | 8 | 11 | ವಾದ್ಯವಿಶೇಷ |
| ಪಥಶ್ರಮ | 3 | 19 | ದಾರಿ ನಡೆದ ಆಯಾಸ |
| ಪದ್ಮಾಸನ | 3 | 21 | ಬ್ರಹ್ಮ |
| ಪರಬಲ | 5 | 42 | ಶತ್ರು ಸೈನ್ಯ |
| ಪರಿಧೌತ | 4 | 19 | ಶುಭ್ರ |
| ಪರಿಗತ | 6 | 73 | ಮುಂದುವರಿದ, ಹರಡಿದ |
| ಪರಿಭವ | 5 | 58 | ಅವಮಾನ |
| ಪರಿಭವಣಿಗೆ | 5 | 56 | ಪರಿಭ್ರಮಣ (ಸಂ) |
| ಪರಿಸರ | 7 | 26 | ಅಕ್ಕಪಕ್ಕ |
| ಪರಿಸ್ಫುಟ | 5 | 17 | ವಿಶದ, ನಿಚ್ಚಳ |
| ಪರುಠವಣೆ | 2 | 12 | ವಿಸ್ತಾರ |
| ಪವನಗ್ರಾಸ | 5 | 31 | ಗಾಳಿಯ ಆಹಾರ |
| ಪಲಾಶಶಾಲೆ | 9 | 1 | ಎಲೆಯಮನೆ |
| ಪಶುಪತಿ | 5 | 28 | ಶಿವ |
| ಪಸಾಯ | 6 | 27 | ಉಡುಗೊರೆ |
| ಪಸರಣ | 7 | 28 | ಪ್ರಸರಣ (ಸಂ) |
| ಪಾಡು | 5 | 36 | ಸಮ |
| ಪಾಯಕ | 4 | 26 | ಕಾಲಾಳು |
| ಪಾಯ್ಕೆ | 5 | 24 | ಹಾಯುವಿಕೆ |

| | | | |
|---|---|---|---|
| ಪಾಯುವಧಾರು | 6 | 35 | ಎಚ್ಚರದಿಂದ ಹೆಜ್ಜೆಯಿಡು |
| ಪಾರಿವ | 5 | 2 | ಪಾರಿವಾಳದಹಕ್ಕಿ (?) |
| ಪಾರಿಕಾಂಕ್ಷಿ | 2 | 8 | ಸಂನ್ಯಾಸಿ |
| ಪಾಳಿ | 3 | 19 | ಕ್ರಮ (?) |
| ಪಿನಾಕಿ | 5 | 10 | ಈಶ್ವರ |
| ಪೀಯೂಷ | 5 | 70 | ಅಮೃತ |
| ಪುರಂದರ | 6 | 8 | ಇಂದ್ರ |
| ಪುರುಹೂತ | 6 | 15 | |
| ಪುಳಿಂದ | 5 | 26 | ಬೇಡ |
| ಪುಳಿಂದಿ | 5 | 4 | ಬೇಡತಿ |
| ಪೂರಾಯ | 5 | 10 | ವಿಸ್ತಾರ, ಪೂರ್ಣ |
| ಪೈಸರ | 6 | 55 | ಕುಗ್ಗು, ಜಾರು, |
| ಪ್ರಭಂಜನ | 3 | 25 | ಬಿರುಗಾಳಿ |
| ಪ್ರಣವ | 6 | 47 | ಓಂಕಾರ |
| ಪ್ರವರ | 2 | 8 | ಶ್ರೇಷ್ಠ |
| ಪ್ರಾವರಣ | 7 | 23 | ಹೊದಿಕೆ |

## ಬ

| | | | |
|---|---|---|---|
| ಬದಿ | 5 | 10 | ಪಕ್ಕ |
| ಬದ್ದುಗೆ | 4 | 5 | ಗಂಟು |
| ಬಣಗು | 1 | 3 | ಕೀಳು, ಸಾಮಾನ್ಯ |
| ಬಣಬೆ | 3 | 16 | ಮೆದೆ, ಕುಪ್ಪೆ |
| ಬವರ | 2 | 11 | ಯುದ್ಧ |
| ಬಂದುಗೆ | 5 | 41 | ಪುಷ್ಪವಿಶೇಷ |
| ಬಱಿತುದು | 5 | 26 | ಬತ್ತಿತು, ಅಸಮರ್ಥವಾಗು |
| ಬರ್ಹಿ | 8 | 13 | ದರ್ಭೆ |
| ಬರ್ಹಿರ್ಮುಖ | 3 | 12 | ದೇವತೆ |
| ಬಲವಿರೋಧಿ | 6 | 11 | ದೇವೇಂದ್ರ |
| ಬಳವಿಗೆ | 5 | 27 | ಅಭಿವೃದ್ಧಿ |
| ಬಾಲೇಂದುಧರ | 5 | 12 | ಈಶ್ವರ |
| ಬಾಹತ್ತರದ | 2 | 2 | ಬಹು ಸಂಖ್ಯೆಯ |
| ಬಿಡಯ | 6 | 42 | ಅಗಲಿಕೆ |

| | | | |
|---|---|---|---|
| ಬಿಸುಗುದಿ | 5 | 19 | ಬಿಸಿಯಾಗಿ ಕುದಿಯುವುದು |
| ಬಿನ್ನಣ | 5 | 32 | ವಿಜ್ಞಾನ (ಸಂ) |
| ಬೀದಿವರಿ | 5 | 49 | ಸ್ವೇಚ್ಛೆಯಾಗಿ ತಿರುಗಾಡು |
| ಬೀಡು | 7 | 27 | ಬಿರಿ |
| ಬೀ | 8 | 32 | ನಾಶ, ವ್ಯಯ |
| ಬೂತಾಟ | 4 | 26 | ನಾಚಿಕೆಗೆಟ್ಟ ಮಾತು |
| ಬೂತುಗೆಡಹು | 6 | 63 | ನಾಚಿಕೆಗೆಟ್ಟು ಮಾತಾಡು |
| ಬೆಳ್ಳಾಲ | 5 | 5 | ಒಂದು ಬಗೆಯ ಬಲೆ |
| ಬೊಬ್ಬಿಱಿ | 5 | 11 | ಆರ್ಭಟಿಸು |
| ಬೋಳೆಯ | 4 | 2 | ದೇವತೆ |
| ಬೋಳೈಸು | 5 | 70 | ಸಮಾಧಾನ ಮಾಡು |
| ಬಂಧುರ | 7 | 19 | ಮನೋಹರ |

## ಭ

| | | | |
|---|---|---|---|
| ಭಂಗಿಸು | 5 | 42 | ಸಂಹರಿಸು |
| ಭರ್ಗ | 6 | 76 | ಈಶ್ವರ |
| ಭವಣಿಗೆ | 2 | 7 | (ದುಸ್ಥಿತಿ) ತಿರುಗಾಟ |
| ಭಣಿತ | 6 | 47 | ಹೇಳಿಕೆ (?) ನಂಬಿಕೆ (?) |
| ಭವಣೆ | 5 | 47 | ಭ್ರಮತಲೆಣೆ, ತಿರುಗುವಿಕೆ |
| ಭಾಳ | 7 | 61 | ಹಣೆ |
| ಭಾರವಿಸು | 6 | 22 | ತುಂಬು |
| ಭಾರವಣೆ | 3 | 12 | ಹೊಣೆ (?) |
| ಭಾರಾಂತ | 2 | 8 | ಮಹತ್ತಾದ ಹೊಣೆ (?) |
| ಭಾರಣೆ | 3 | 12 | ಹೊಣೆ |
| ಭುಜಗ | 5 | 19, 63 | ಪರ್ವ |
| ಭುಲ್ಲವಿಸು | 2 | 7 | ಉತ್ಸಾಹಗೊಳ್ಳು |
| ಭುಲ್ಲವಣೆ | 6 | 6 | ಉತ್ಸಾಹ |
| ಭೂರಿ | 5 | 1 | ದೊಡ್ಡದಾದ |
| ಭೂಯಾತ್ | 3 | 23 | ನೆರವೇರಲಿ |
| ಭಿತ್ತಿ | 6 | 32 | ಗೋಡೆ |

## ಮ

| | | | |
|---|---|---|---|
| ಮಖದಯ್ಯ | 6 | 48 | ಯಜ್ಞಕರ್ತೃ |

| | | | |
|---|---|---|---|
| ಮಜಡ | 6 | 76 | ನಿಧಾನ |
| ಮಣಿಹ | 6 | 28 | ಉದ್ಯೋಗ |
| ಮದೀಯ | 5 | 13 | ನನ್ನ |
| ಮರಿಚ | 4 | 11 | ಮೆಣಸು |
| ಮಱುದಲೆ | 6 | 3 | ಪ್ರತಿರೂಪ |
| ಮಸ್ತಕ | 6 | 57 | ತಲೆ |
| ಮಹೀಧರ | 4 | 6 | ಬೆಟ್ಟ |
| ಮಾಣ್ | 6 | 16 | ನಿಲ್ಲು |
| ಮಾರ್ಗಣ | 5 | 2 | ಬಾಣ |
| ಮಾಱಾಂಕ | 6 | 34 | ಪ್ರತಿಬಿಂಬ |
| ಮೀಟು | 7 | 39 | ತಳದಿಂದ ಚುಚ್ಚಿ ಮೇಲೆತ್ತುವುದು |
| ಮಿಡುಕು | 4 | 10 | ಪರಾಕ್ರಮ, ಅಲ್ಲಾಡು |
| ಮುಕ್ಕುಱಿಕು | 7 | 36 | ಮುತ್ತಿಗೆಹಾಕು |
| ಮುಗುಳು | 4 | 10 | ಮೊಗ್ಗು, ಮುಚ್ಚಿದ |
| ಮುಂಗುಡಿ | 2 | 14 | ಸೈನ್ಯದ ಮುಂಭಾಗ |
| ಮುಂಡಾಡು | 6 | 66 | ಮುದ್ದಾಡು |
| ಮುಂಡಿಗೆ | 7 | 38 | ಮರದ ಬುಡ |
| ಮುಂಬಿಗ | 2 | 3 | ಎದುರಿಗೆ ಇರುವವ |
| ಮುರುಕ | 7 | 40 | ಪ್ರತಿಭಟನೆ |
| ಮುರುಹು | 2 | 5 | ಬಾಗಿಸು, ತಿರುಗಿಸು |
| ಮುರಿ | 7 | 20 | ತಿರುಗುವ |
| ಮುಱಿಕಿಸು | 2 | 18 | ಕೊಂಕಿಸು |
| ಮುಸುಂಡಿ | 7 | 22 | ಆಯುಧ ವಿಶೇಷ |
| ಮೃಗಯಾಚರಣೆ | 5 | 1 | ಬೇಟೆ |
| ಮೃಗಾಂಕ | 6 | 3 | ಚಂದ್ರ |
| ಮೆಯ್ಯಿಕ್ಕು | 4 | 22 | ನಮಸ್ಕರಿಸು |
| ಮೇಗೆಱೆಯ | 5 | 45 | ಮೇಲ್ಗಡೆಯ |
| ಮೇದಿನಿ | 1 | 6 | ಭೂಮಿ |
| ಮೆಲ್ವಾಯ್ದು | 5 | 28 | ಮೇಲೆಬಿದ್ದು |
| ಮೇಳವಿಸು | 4 | 30 | ಕೂಡಿಸು |
| ಮೋಹರ | 6 | 17 | ಗುಂಪು |
| ಮೌಕ್ತಿಕ | 4 | 11 | ಮುತ್ತು |

| | | | |
|---|---|---|---|
| ಮಂಡನ | 6 | 33 | ಅಲಂಕಾರ |
| ಮೆಂಡವಿಗೆ | 7 | 19 | ಮಂಟಪ |

ರ

| | | | |
|---|---|---|---|
| ರಜ | 5 | 49 | ಧೂಳಿ |
| ರಜತಗ್ರಾವ | 5 | 72 | ಬೆಳ್ಳಿಬೆಟ್ಟ-ಕೈಲಾಸ |
| ರಹಿ | 7 | 12 | ಏಕಾಂತ, ಗುಟ್ಟು (?) |
| ರಾಜಮೌಳಿ | 4 | 21 | ಈಶ್ವರ |
| ರಾಜೀವಪೀಠ | 1 | 1 | ಬ್ರಹ್ಮ |
| ರಾಣಿಕ | 7 | 12 | ಔಚಿತ್ಯ, ಹೊಂದಿಕೆ |
| ರುಧಿರ | 3 | 11 | ರಕ್ತ |
| ರೋಚಕ | 8 | 12 | ಹಸಿವು, ಆಕಾಂಕ್ಷೆ |
| ರೌದ್ರಾಹಿ | 6 | 57 | ಭಯಂಕರ ಸರ್ಪ |

ಱ

| | | | |
|---|---|---|---|
| ಱಾಟಳ | 6 | 63 | ಚಕ್ರ |

ಲ

| | | | |
|---|---|---|---|
| ಲಗಡಿಸು | 5 | 33 | ಲಗಾಯಿಸು, ಹೊಡೆ |
| ಲವಣಿ | 5 | 33 | ಬಾಗು |
| ಲಹರಿ | 5 | 70 | ಅಲೆ |
| ಲಳಿ | 5 | 33 | ಚುರುಕು, ಆಶ್ಚರ್ಯ |
| ಲಾಗಿಸು | 3 | 33 | ನರ್ತಿಸು |
| ಲಾಯ್ | 6 | 23 | ಸ್ಥಾಯಿ, ಸ್ಥೈರ್ಯ |
| ಲಾಸ್ಯ | 6 | 21 | ನೃತ್ಯ |

ವ

| | | | |
|---|---|---|---|
| ವಟ | 2 | 20 | ಆಲದಮರ |
| ವರೂಥ | 6 | 5 | ರಥ |
| ವರ್ತಿಸು | 3 | 1 | ಹರಡು |
| ವಸುಮತಿ | 7 | 7 | ಭೂಮಿ |
| ವಹಿಲ | 6 | 9 | ವೇಗ |
| ವಾರಣ, ವಾರುವ | 7 | 41 | ಆನೆ, ಕುದುರೆ |
| ವಾರಕ್ | 7 | 17 | ರಾಶಿ |

| | | | |
|---|---|---|---|
| ವಾಸವ | 6 | 45 | ಇಂದ್ರ |
| ವಾಸಿ | 5 | 18 | ಹಟ (?) |
| ವಾಂಛಿತ | 4 | 14 | ಇಷ್ಟಾರ್ಥ |
| ವಿಗಡ | 5 | 2 | ದೊಡ್ಡ, ಮಹತ್ತುಳ್ಳ |
| ವಿಗತನಯನಮಹೀಶ | 8 | 25 | ಧೃತರಾಷ್ಟ್ರ |
| ವಿಹಾಳ | 4 | 24 | ಮಲಿನತೆ |
| ವಿಡಾಯ | 6 | 52 | ಶಕ್ತಿ, ಆಧಿಕ್ಯ |
| ವಿತ್ತ | 5 | 40 | ಹಣ |
| ವಿಧಾವಂತ | 7 | 18 | ತೆರಿಗೆ ಎತ್ತುವವನ, ಬಾಡಿಗೆ ಪಡೆಯುವವನ |
| ವಿಪಿನ | 3 | 19 | ಕಾಡು |
| ವಿಪಿನೌಕಸ | 5 | 15 | ಋಷಿ |
| ವಿಭಾಡಿಸು | 3 | 24 | ಹೋಗಲಾಡಿಸು |
| ವಿರಾಮ | 7 | 38 | ತೋಟ |
| ವಿಮೋಚನ | 7 | 4 | ಕಣ್ಣು |
| ವೀಚುಪ್ರೋಪುಪು | 4 | 9 | ಅಲೆಅಲೆಯಾಗಿ ಹೊಮ್ಮಿತು |
| ವೆಗ್ಗಳ | 5 | 26 | ಉತ್ತಮ |
| ವೆಂಠಣಿಸು | 5 | 2 | ಸುತ್ತುವರಿಸು |
| ವೇಗಾಯ್ಲ | 5 | 20 | ಹೆಚ್ಚುವೇಗ |
| ವೇಢೆ | 7 | 23 | ಸುತ್ತುಗಟ್ಟು |
| ವೇಢೆ | 5 | 38 | ಸಂಕಟ |
| ವೈವರ್ಣ್ಯ | 5 | 48 | ವರ್ಣವಿಕಾರ |
| ವಂಗಡಿಸು | 7 | 40 | ಗುಂಪುಗೂಡು |

## ಶ

| | | | |
|---|---|---|---|
| ಶಕ್ರ | 9 | 32 | ಇಂದ್ರ |
| ಶಬರ | 5 | 1 | ಬೇಡ |
| ಶತಮನ್ಯು | 6 | 13 | ಇಂದ್ರ |
| ಶತಯಾಗಸುತ | 6 | 36 | ಇಂದ್ರನ ಮಗ, ಅರ್ಜುನ |
| ಶಶಿಮೌಳಿ | 4 | 3 | ಈಶ್ವರ |
| ಶಾಬರ | 5 | 3 | ಬೇಡ ಸಂಬಂಧದ ವೇಷ |
| ಶಿಂಜಾರವ | 6 | 35 | ಬಿಲ್ಲಿನ ದನಿ |
| ಶ್ರುತಿಯುವತಿ | 4 | 7 | ವೇದವನಿತೆ |

## ಸ

| | | | |
|---|---|---|---|
| ಸೂರಿ | 1 | 2 | ವಿದ್ವಾಂಸ |
| ಸೂಳೆಗಾರಿಕೆ | 6 | 27 | ಮೋಹ, ಜಾರಕ |
| ಸೃಕ್ | 7 | 24 | ಯಜ್ಞದಲ್ಲಿ ಹೋಮಮಾಡುವಾಗ ಬಳಸುವ ಸೌಟುಗಳು |
| ಸೃವ | 7 | 24 | ,, |
| ಸೆಗಳಿಕೆ | 7 | 49 | ತಾಪ, ತೀಕ್ಷ್ಣತೆ (ಸಂ) |
| ಸೆಜ್ಜೆ | 6 | 36 | ಶಯ್ಯಾಗೃಹ, ಹಾಸಿಗೆ |
| ಸೆಣಸು | 5 | 39 | ಹೋರಾಡು |
| ಸ್ವೇದಜಾಲ | 5 | 38 | ಬೆವರು |
| ಸೈಗೆಯ್ | 5 | 58 | ನಮಸ್ಕರಿಸು |
| ಸೈನಡೆ | 4 | 6 | ಪುಣ್ಯಕರವಾದ ಮಾರ್ಗ |
| ಸೈಸರಿಸು | 4 | 19 | ನೇರವಾಗಿ ಹೋಗಿ |
| ಸೊಗಡು | 2 | 15 | ವಾಸನೆ |
| ಸೊಡರು | 6 | 24 | ದೀಪ |
| ಸೊರಹು | 6 | 35 | ಹೇಳು |
| ಸೋಗೆಗಣ್ಣಬಲೆ | 6 | 36 | ವಿಸ್ತಾರ ನೇತ್ರದ ಹೆಣ್ಣು |
| ಸೌಭದ್ರ | 3 | 16 | ಅಭಿಮನ್ಯು |
| ಸಂಕಲೆ | 5 | 5 | ಶೃಂಖಲಾ (ಸಂ) |
| ಸಂದಣಿಸು | 3 | 27 | ಒಟ್ಟುಸೇರು |
| ಸಂವರಿಸು | 3 | 9 | ಕಟ್ಟು |
| ಸಂಹೃತಿ | 5 | 64 | ಹೂಡುವುದು |

## ಹ

| | | | |
|---|---|---|---|
| ಹಮ್ಮು | 5 | 56 | ಬಿಂಕ |
| ಹಮ್ಮುಗೆ | 5 | 56 | ಕುಣಿಕೆ (?) |
| ಹಳುವ | 3 | 16 | ಕಾಡು |
| ಹಸಾದ | 4 | 4 | ಅಪ್ಪಣೆ |
| ಹರದ | 7 | 58 | ವ್ಯಾಪಾರಿ |
| ಹರಹು | 5 | 2 | ವಿಸ್ತಾರ |
| ಹರಿಗೆ | 7 | 32 | ಗುರಾಣಿ |
| ಹರಿಬ | 2 | 13 | ಕರ್ತವ್ಯ |
| ಹರಣ | 5 | 40 | ಪ್ರಾಣ |

| | | | |
|---|---|---|---|
| ಹರಿಣ | 5 | 13 | ಜಿಂಕೆ |
| ಹರು | 5 | 15 | ತೀರು, ಕೊನೆಗಾಣು |
| ಹರಾವು | 4 | 14 | ನಾಶ |
| ಹಲ್ಲಣಿಸು | 3 | 36 | ಸಬರಮಾಡು, ಜೀನುಹಾಕು |
| ಹಾಗಾಹಾಗೆ | 5 | 43 | ಹಣೆಹಗೆಯ ಜಪ್ಪ |
| ಹಿಮಕರ | 4 | 28 | ಚಂದ್ರ |
| ಹಿಮಾಂಶು | 9 | 6 | ,, |
| ಹಿಳಿದ | 3 | 2 | ಹಿಂಡಿದ |
| ಹೀಲಿ | 5 | 2 | ನವಿಲುಗರಿ ಕಟ್ಟು |
| ಹುಗಿಲು | 4 | 5 | ಸೀಳು, ತುಂಡು |
| ಹುತವಹನ, ಪ್ರತಿನಿಧಾನ | 7 | 23 | ಬೆಂದ ಯಜ್ಞಾಹುತಿ |
| ಹುಯ್ಯಲು | 4 | 29 | ಕಷ್ಟದಿಂದ ಬೇಡಿಕೊಳ್ಳುವುದು |
| ಹೂಣು | 7 | 12 | ಪ್ರತಿಜ್ಞೆಮಾಡು |
| ಹೆಕ್ಕಳಿಸು | 3 | 9 | ಹೆಚ್ಚಾಗು |
| ಹೆಜ್ಜೆಸೊಗಲ | 6 | 79 | ಚಂದ್ರಧರ, ಈಶ್ವರ |
| ಹೇಳಿಗೆ | 3 | 9 | ಹಾವಿನ ಬುಟ್ಟಿ |
| ಹೊಗರು | 4 | 10 | ಕಾಂತಿ |
| ಹೊಗ್ಗಂಬು | 5 | 29 | ಒಂದು ಬಗೆಯ ಬಾಣ |
| ಹೊಡಕರಿಸು | 5 | 56 | ಕಾಣಿಸಿಕೊ |
| ಹೊದಱು | 5 | 56 | ಪೊದೆ |
| ಹೊಯ್ಲು | 6 | 74 | ಹೊಡೆತ |
| ಹೊರಳಿ | 5 | 56 | ಗೊಂದಲ |
| ಹೊರೆ | 5 | 1 | ಕಾಪಾಡು |
| ಹೊರೆಯೋಱ | 4 | 15 | ಕಾಂತಿಯುಕ್ತವಾಗಿ |
| ಹೊಱಗೆ | 4 | 10 | ಕಾರ್ಯ |
| ಹೊಲಬು | 4 | 15 | ದಾರಿ |
| ಹೊಳ್ಳಾದವು | 4 | 25 | ಸತ್ವಹೀನವಾದವು |

**ಪ್ರವಾಸ ಸಾಹಿತ್ಯ:—**

ಹೈಮಾಚಲ ಸಾನ್ನಿಧ್ಯದಲ್ಲಿ : ಶ್ರೀ ಸೋಮನಾಥಾನಂದ ೨ ೦ ೦
ಅಮರನಾಥಯಾತ್ರೆ : ಶ್ರೀ ಸೋಮನಾಥಾನಂದ ೧ ೦ ೦
ಕೈಲಾಸ ಮಾನಸಸರೋವರದ ಯಾತ್ರೆ :
ಶ್ರೀ ಜ್ಞಾನಘನಾನಂದ ೧ ೮ ೦

**ಸಾಹಿತ್ಯ ವಿಮರ್ಶೆ :—**

ಭಾಷಣಗಳು ಮತ್ತು ಲೇಖನಗಳು : ಭಾಗ ೧
ಶ್ರೀ ಎ. ಆರ್. ಕೃಷ್ಣಶಾಸ್ತ್ರಿ ೬ ೦ ೦
,, *ಭಾಗ ೨ ,, ೪ ೦ ೦
*ಪ್ರಾಚೀನ ಸಾಹಿತ್ಯ : ಶ್ರೀ ಟಿ. ಎಸ್ ವೆಂ. ೧ ೮ ೦
ರತ್ನಾಕರವರ್ಣಿ : ಶ್ರೀ ಟಿ. ಎಸ್. ಶಾಮರಾವ್ ೦ ೮ ೦
ಮುಚ್ಛಕಟಿಕ: ಶ್ರೀ ಎಚ್.ಎಂ.ಶಂಕರನಾರಾಯಣರಾವ್ ೧ ೦ ೦
ಕನ್ನಡ ಧ್ವನ್ಯಾಲೋಕ : ಡಾ॥ ಕೆ. ಕೃಷ್ಣಮೂರ್ತಿ [illegible] ೦ ೦
ನಿರಂಕುಶಮತಿಯಿಂದ ಆತ್ಮಶ್ರೀ : ಶ್ರೀ 'ಕುವೆಂಪು' ೧ ೦ ೦
ಕನ್ನಡ ಸಾಹಿತ್ಯ ಮತ್ತು ಮೈಸೂರು ಒಡೆಯರು :
ಶ್ರೀ ಡಿ. ಟಿ. ರಂಗಸ್ವಾಮಿ ೧ ೦ ೦

**ಸಂಕೀರ್ಣ :—**

ಭಾರತದ ಸೂತ್ರಧಾರ : ಶ್ರೀ ಶ್ರೀನಿವಾಸಯ್ಯಂಗಾರ್ ೧ ೮ ೦
ವರ್ಧಾಶಿಕ್ಷಣ : ಶ್ರೀ ತ. ಸು. ಶಾಮರಾಯ
ಶ್ರೀ ರಾಮಚಂದ್ರರಾವ್ ೩ ೮ ೦
ಅನರ್ಘಕೋಶ : ಶ್ರೀ ನಾ ಕಸ್ತೂರಿ ೨ ೦ ೦
ರೋಮನ್ ಚಕ್ರಾಧಿಪತ್ಯದ ಚರಿತ್ರೆ
ಡಾ॥ ಎಸ್. ಶ್ರೀಕಂಠಶಾಸ್ತ್ರಿ ೧ ೮ ೦
ಬಾರ್ಬೊಸ ಕಂಡ ವಿಜಯನಗರ : ತ. ರಾ. ಸು. ೦ ೮ ೦
ದರ್ಶನಗಳು: ಶ್ರೀ ವಿ.ಟಿ.ತಿರುನಾರಾಯಣ ಅಯ್ಯಂಗಾರ್ ೦ ೧೦ ೦

**Rural Econamics :**
**Sri G. Ramakrishna Reddy**
**Sri Royal Singh** ೪ ೦ ೦

ಹರಿಹರನ ಗಿರಿಜಾಶಂಕರರು : ಶ್ರೀ ಜಿ. ಬ್ರಹ್ಮಪ್ಪ ೧ ೦ ೦
ಚೈನದರ್ಶನ : ಶಮನ ೦ ೪ ೦
ನಾ ಕಂಡ ಕಲಾವಿದರು : ಶ್ರೀ ವಾಸುದೇವಾಚಾರ್ಯ ೧ ೮ ೦
ಶ್ರೀ ಕೃಷ್ಣನ ಕಥೆ : ಶ್ರೀ ಕೆ. ವೆಂಕಟರಾಮಪ್ಪ ೧ ೪ ೦

---

# ನಮ್ಮ ಪ್ರಕಟಣೆಗಳು

(*ಈ ಪ್ರತಿಗಳು ಮುಗಿದುಹೋಗಿ ಮತ್ತೆ ಅಚ್ಚಿನಲ್ಲಿವೆ)

**ಕಥೆಗಳು :—**

| | | | |
|---|---|---|---|
| *ಕಥಾವಲ್ಲರಿ : ಶ್ರೀ ತ. ಸು. ಶಾಮರಾಯ | ೨ | ೦ | ೦ |
| ಸಣ್ಣ ಕಥೆಗಳು : ಶ್ರೀ 'ಅಶ್ವತ್ಥ' | ೨ | ೪ | ೦ |
| ಅಯ್ದು ಹತ್ತು ಕಥೆಗಳು : ಶ್ರೀ ಗೋಪಾಲಕೃಷ್ಣರಾವ್ | ೨ | ೦ | ೦ |
| ಮೈಥಿಲಿ : ಶ್ರೀ ಎಸ್. ಅನಂತನಾರಾಯಣ | ೧ | ೮ | ೦ |
| ಬಾಳಕಣಿವೆ : ಶ್ರೀ 'ಶ್ಯಾಮ' | ೧ | ೦ | ೦ |
| ಮುರಿದ ಮದುವೆ : ಶ್ರೀ ಜಿ. ವೆಂಕಟಯ್ಯ | ೧ | ೮ | ೦ |

**ನಾಟಕಗಳು :—**

| | | | |
|---|---|---|---|
| ದುರಂತ ಮತ್ತು ಇತರ ಪ್ರಸಾರ ನಾಟಕಗಳು : ಶ್ರೀ ಎಚ್. ಕೆ. ರಂಗನಾಥ್ | ೧ | ೮ | ೦ |
| *ರೂಪಾಯಿಗಿಡ : ಶ್ರೀ 'ಕ್ಷೀರಸಾಗರ' | ೦ | ೮ | ೦ |
| ಬಹುಮಾನ : ಶ್ರೀ ಅಶ್ವತ್ಥ | ೧ | ೮ | ೦ |

**ಸಂಗ್ರಹಗಳು :—**

| | | | |
|---|---|---|---|
| ಆದಿಪರ್ವ ಸಂಗ್ರಹ (ಗದುಗಿನ ಮಹಾಭಾರತ) | ೧ | ೮ | ೦ |
| ಸಭಾಪರ್ವ ಸಂಗ್ರಹ ,, | ೨ | ೦ | ೦ |
| ವಿರಾಟಪರ್ವ ಸಂಗ್ರಹ ,, | ೨ | ೦ | ೦ |
| ಉದ್ಯೋಗಪರ್ವ ಸಂಗ್ರಹ ,, | ೧ | ೮ | ೦ |
| ಅರಣ್ಯಪರ್ವ ಸಂಗ್ರಹ ,, | ೧ | ೮ | ೦ |
| ಭೀಷ್ಮಪರ್ವ ಸಂಗ್ರಹ ,, | (ಅಚ್ಚಿನಲ್ಲಿ) | | |
| ಬಸವರಾಜದೇವರ ರಗಳೆ : ಶ್ರೀ ಟಿ. ಎಸ್. ವೆಂ. | ೨ | ೦ | ೦ |
| ಜೈಮಿನಿಭಾರತ ಸಂಗ್ರಹ : ಶ್ರೀ ತ. ಸು. ಶಾಮರಾಯ | ೪ | ೦ | ೦ |
| ಮಹಾಭಾರತ ಸಂಗ್ರಹ ಭಾಗ ೧ ,, | ೬ | ೦ | ೦ |

**ಕವಿತೆಗಳು :—**

| | | | |
|---|---|---|---|
| *ಉಂಗುರ : ಶ್ರೀ ಕೆ. ನರಸಿಂಹಸ್ವಾಮಿ | ೧ | ೮ | ೦ |
| ಸಾಮಗಾನ : ಶ್ರೀ ಜಿ. ಎಸ್. ಶಿವರುದ್ರಪ್ಪ | ೧ | ೪ | ೦ |
| ಚೆಲುವು-ಒಲವು : ,, | ೧ | ೦ | ೦ |
| ಅರ್ಘ್ಯ : ಶ್ರೀ ಎಂ. ಎಸ್. ಅನಂತಪದ್ಮನಾಭರಾವ್ | ೧ | ೦ | ೦ |